ಡಾ. ತಂಬಂಡ ವಿಜಯ್ ಪೂಣಚ್ಚ

# ಪ್ರತ್ಯೇಕ ಕೊಡಗು ರಾಜ್ಯ

## ಮೂಲನಿವಾಸಿಗಳು ಮತ್ತು ವಲಸೆಗಾರರು



# ಪ್ರತ್ಯೇಕ ಕೊಡಗು ರಾಜ್ಯ

## ಮೂಲನಿವಾಸಿಗಳು ಮತ್ತು ವಲಸೆಗಾರರು

ಡಾ. ತಂಬಂಡ ವಿಜಯ್ ಪೂಣಚ್ಚ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

PRATYEKA KODAGU RAJYA- By Dr. Thambanda Vijay Poonacha, Published by The Director, Prasaranga, Kannada University, Hampi, Vidyaranya, Kamalapura - 583 221 First Impression 1998, Pp ii+27, Rs. 3-00

ಮಂಟಪ ಮಾಲೆ ೩೨



ಪ್ರಕಾಶಕರು
ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ ರೂ. ೩.೦೦

ಮುದ್ರಣ
ಪರಿಮಳ ಮುದ್ರಣಾಲಯ
ಹನುಮಂತನಗರ
ಬೆಂಗಳೂರು ೫೬೦ ೦೧೯

# ಪ್ರತ್ಯೇಕ ಕೊಡಗು ರಾಜ್ಯ

## ಮೂಲನಿವಾಸಿಗಳು ಮತ್ತು ವಲಸೆಗಾರರು

- ಡಾ. ತಂಬಂಡ ವಿಜಯ್ ಪೂಣಚ್ಚ

"ಪ್ರತ್ಯೇಕತೆ "ಯ ಕೂಗು ಸ್ವತಂತ್ರ ಭಾರತಕ್ಕೆ ಹೊಸದೇನಲ್ಲ. ಕಾಶ್ಮೀರಿ, ಪಂಜಾಬಿ, ಬೋಡೋ, ಗೂರ್ಖಾ, ಜಾರ್ಖಂಡ್ ಮಾದರಿಯ "ಪ್ರತ್ಯೇಕತಾ" ಹೋರಾಟಗಳು ದೇಶದ ಜನರ ಗಮನ ಸೆಳೆದಿವೆ. ಕಾಶ್ಮೀರ, ಪಂಜಾಬ ಭಾರತದ ಗಡಿರಾಜ್ಯಗಳು. ಹಾಗಾಗಿ ಈ ರಾಜ್ಯಗಳಲ್ಲಿ ಭಾರತೀಯ ಮತ್ತು ವಿದೇಶಿ ಪಾಕಿಸ್ತಾನೀಯರ ನಡುವೆ ಘರ್ಷಣೆ ಭಾರತ ಸ್ವಾತಂತ್ರವಾದಂದಿನಿಂದಲೂ ಇದೆ. ವಿದೇಶಿಯರ ವಲಸೆ ಸ್ಥಳೀಯರ ಸಾಂವಿಧಾನಿಕ ಹಕ್ಕುಗಳನ್ನು ಮೊಟಕುಗೊಳಸಿವೆ. ಸ್ಥಳೀಯರ ಇರುವಿಕೆಯ ಹಕ್ಕಿಗೆ ಚ್ಯುತಿ ಬಂದಿದೆ. ಹೀಗಾಗಿ ಅಕ್ರಮ ವಲಸಿಗರ ವಿರುದ್ಧದ ಹೋರಾಟದ ಜೊತೆಗೆ ಸ್ಥಳೀಯರ ಹಕ್ಕುಗಳಿಗಾಗಿಯೂ ಹೋರಾಟಗಳು ಆರಂಭವಾಗಿವೆ. ಇಂಥ ಸಂದರ್ಭಗಳಲ್ಲಿ ಪಂಜಾಬ ಮತ್ತು ಕಾಶ್ಮೀರದಲ್ಲಿ ಪಾಕಿಸ್ತಾನ ಇಂಟಲಿಜೆನ್ಸ್ ವಿಭಾಗದವರ ಕುಮ್ಮುಕ್ಕಿನಿಂದಾಗಿ ಪ್ರತ್ಯೇಕತೆಯ ಬೇಡಿಕೆ ರಾರಾಜಿಸತೊಡಗಿದೆ. ಅಸ್ಸಾಂನಲ್ಲಾಗಲಿ ಅಥವಾ ಮಿಜೋರಾಂ ಪ್ರದೇಶಗಳಲ್ಲಾಗಲಿ ಮೂಲ ಸಮಸ್ಯೆ ವಿದೇಶಿಯರದ್ದೇ. ದೆಹಲಿಯಲ್ಲಿನ ಕೇಂದ್ರ ಸರ್ಕಾರದ ಆಡಳಿತಾತ್ಮಕ ವೈಫಲ್ಯಗಳು ಹಾಗೂ ಅಧಿಕಾರದ ಕೇಂದ್ರೀಕರಣ ಕೂಡ ಈ ಸಮಸ್ಯೆಗಳಿಗೆ ಪೂರಕವಾಗಿವೆ ಎಂಬುದನ್ನು ಇಲ್ಲಿ ಗಮನಿಸಬೇಕಾಗಿದೆ.

ಕೊಡಗಿನಲ್ಲಿನ "ಪ್ರತ್ಯೇಕ ರಾಜ್ಯದ ಬೇಡಿಕೆ"ಯ ವೈಶಿಷ್ಟ್ಯ ಏನೆಂಬುದನ್ನು ನಾವಿಲ್ಲಿ ಅರಿಯಬೇಕಾಗಿದೆ. ಕೊಡಗು ೧೯೫೬ಕ್ಕಿಂತ ಮೊದಲು ಪ್ರತ್ಯೇಕ ಪ್ರಾಂತ್ಯವಾಗಿತ್ತು ಎನ್ನುವ ಮಾತಿನಿಂದ ಒಂದು ಭೌಗೋಳಿಕವಾದ ರಾಷ್ಟ್ರೀಯತೆಯನ್ನು ಕಂಡುಕೊಳ್ಳಲು 'ಕೊಡಗು ರಾಜ್ಯ ಮುಕ್ತಿ ಮೋರ್ಛಾ' (ಕೆ.ಆರ್.ಎಂ.ಎಂ.) ಹೆಣಗುತ್ತಿದೆ. ಅದರೊಂದಿಗೆ ಒಂದೇ ಭಾಷೆ, ಒಂದೇ ಸಂಸ್ಕೃತಿ ಹಾಗೂ ಒಂದೇ ರೀತಿಯ ಏಕರೂಪಿ ಜನಾಂಗವನ್ನು ಕೊಡಗಿನಲ್ಲಿ ಅದು ಪ್ರತಿಪಾದಿಸುತ್ತಿದೆ. ಮಿಕ್ಕುಳಿದವರೆಲ್ಲಾ "ವಲಸಿಗರು" ಎನ್ನುವ ತೀರ್ಮಾನ ಕೆ.ಆರ್.ಎಂ.ಎಂ.ನ ಪ್ರಣಾಳಿಕೆಗಳಲ್ಲಿ, ಪುಸ್ತಿಕೆಗಳಲ್ಲಿ ಹಾಗೂ ಭಾಷಣಗಳಲ್ಲಿ ಮೇಲಿಂದ ಮೇಲೆ ಪ್ರತಿಪಾದಿಸಲ್ಪಡುತ್ತಿದೆ. ತೃತೀಯ ಜಗತ್ತಿನ ರಾಷ್ಟ್ರಗಳಲೆಲ್ಲ ಸಾಮಾನ್ಯವಾಗಿ ಕಾಣುವ ಬಡತನ, ನಿರುದ್ಯೋಗ.... ಇನ್ನಿತರ ಸಮಸ್ಯೆಗಳಿಗೆ

ಜಾಗತೀಕರಣ ಹಾಗೂ ದುರ್ಬಲ ಆರ್ಥಿಕ ಸಿದ್ಧಾಂತಗಳು ಕಾರಣವೆನ್ನುವ ಸೂಕ್ಷ್ಮಗಳನ್ನು ಅರಿಯದೆ "ಮೂಲನಿವಾಸಿಗಳು" ಹಾಗೂ "ವಲಸೆಗಾರರು" ಎಂದು ಫಾಸಿಸ್ಟ್ ಸಿದ್ಧಾಂತದ ಪ್ರಮುಖ ಅಸ್ತ್ರವಾದ ದ್ವೇಷವನ್ನು ಹರಡಲಾಗುತ್ತಿದೆ. ಈ "ವಲಸೆಗಾರರ್‍ಯಾರೂ" ವಿದೇಶಿಯರಲ್ಲ. ಅವರೆಲ್ಲಾ ಭಾರತೀಯರು ಎನ್ನುವ ವಿಷಯವನ್ನು ಇಲ್ಲಿ ಗಮನಿಸಬೇಕಾಗಿದೆ (ಇದರ ಬಗ್ಗೆ ಮುಂದಿನ ಪುಟಗಳಲ್ಲಿ ಚರ್ಚಿಸಲಾಗಿದೆ). ಕೊಡಗಿನಲ್ಲಿ ಕೆ.ಆರ್.ಎಂ.ಎಂ. ಹೇಳುತ್ತಿರುವ ಒಂದೇ ಭಾಷೆ, ಸಂಸ್ಕೃತಿ ಇರುವ ಏಕರೂಪಿ "ಜನಾಂಗ" ಎನ್ನುವುದೊಂದಿಯೇ ಎನ್ನುವ ವಿಷಯವನ್ನು ಈ ಪ್ರಬಂಧದಲ್ಲಿ ವಿಮರ್ಶಿಸಲಾಗಿದೆ.

ಕೊಡಗಿನ ಸ್ವಾತಂತ್ರ ಚಳುವಳಿಗೆ ಹಿರಿಮೆ ತಂದ ಚೆಪ್ಪುಡಿರ ಎಂ. ಪೂಣಚ್ಚನವರಂಥ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಿಗೆ ಕೊಡಗನ್ನು ಕರ್ನಾಟಕದೊಂದಿಗೆ ವಿಲೀನ ಮಾಡಿದ್ದಕ್ಕಾಗಿ ಕೆ.ಆರ್.ಎಂ.ಎಂ. ಅವಮಾನ ಮಾಡುತ್ತಿದೆ. ಕೊಡಗಿನ ಹಿಂದುಳಿದ ವರ್ಗಗಳು ಹಾಗೂ ದಲಿತರು ಸಮಾನಾವಕಾಶಕ್ಕಾಗಿ ಕರ್ನಾಟಕದಲ್ಲಿ ತಲೆಯೆತ್ತಿ ನಿಲ್ಲುವ ವಾತಾವರಣವನ್ನು ಸೃಷ್ಟಿಸಿದ ಪೂಣಚ್ಚನವರಂತಹ ರಾಜಕೀಯ ಮುತ್ಸದ್ಧಿ ಇಂದು ಬ್ರಿಟಿಷ್ ಸಾಮ್ರಾಜ್ಯದ ದಿನಗಳನ್ನು "ರಾಮರಾಜ್ಯ" ವೆಂದು ವೈಭವೀಕರಿಸುತ್ತಿರುವ ಬ್ರಿಟಿಷ್ ಬಾಲಬಡುಕ ಸಿದ್ಧಾಂತಿಗಳ ಬಾಯಿಗೆ ಆಹಾರವಾಗಿರುವುದು ಒಂದು ವಿಪರ್ಯಾಸ. ಇತ್ತೀಚಿನವರೆಗೂ ಲಿಬರೇಷನ್ ವಾರಿಯರ್ಸ್ ಆಫ್ ಕೂರ್ಗ್ (ಲೀವಾಕ್) ಎಂದು ಗುರುತಿಸಲ್ಪಡುತ್ತಿದ್ದ ಈ ಸಂಸ್ಥೆ ಬದಲಾಗುತ್ತಿರುವ ರಾಜಕೀಯ ವಿದ್ಯಮಾನಗಳನ್ನು ನೆನಪಿನಲ್ಲಿಟ್ಟುಕೊಂಡು ಕೆ.ಆರ್.ಎಂ.ಎಂ. ಎನ್ನುವ ದೇಸೀ ಹೆಸರಿನೊಂದಿಗೆ ಈಗ ತನ್ನ ಕಾರ್ಯವನ್ನು ಆರಂಭಿಸಿದೆ. "ಉಗ್ರ ಸಶಸ್ತ್ರ ಹೋರಾಟಗಳ ಮೂಲಕ" ಪ್ರತ್ಯೇಕ ರಾಜ್ಯವನ್ನು ಕೇಳಲು ಹೊರಟ ಲೀವಾಕ್ ಹೊಸ ರಾಜಕೀಯ ತಂತ್ರವನ್ನಾಗಿ "ಒತ್ತಡ-ಚೌಕಾಸಿ-ಒತ್ತಡ"ದಂತಹ ಮಾರ್ಗಗಳನ್ನು "ಮಹಾತ್ಮ ಗಾಂಧಿಯ ಅಹಿಂಸಾ ಹೋರಾಟದ ಆದರ್ಶದೊಂದಿಗೆ" ಮುಂದುವರಿಸುತ್ತಿದೆ. ಒಂದು ಕಡೆಯಿಂದ ಗಾಂಧಿಯ "ಅಹಿಂಸೆಯ" ಆದರ್ಶವನ್ನು ಮಾತಾಡುತ್ತಾ, ಇನ್ನೊಂದು ಕಡೆಯಿಂದ ಹಿಂಸೆಯನ್ನು ವೈಭವೀಕರಿಸುವ "ಹುಲಿಯೊಂದಿಗೆ ಖಡ್ಗವನ್ನೆತ್ತಿ ನಿಂತಿರುವ ವ್ಯಕ್ತಿಯ" ಸಂಕೇತವನ್ನು ಹೊಂದಿರುವ ಕೊಡಗು ದೇಶ ಎನ್ನುವ ಕೆ.ಆರ್.ಎಂ.ಎಂ.ನ ಮುಖವಾಣಿ ಈ ಸಂಘಟನೆಯ ದ್ವಂದ್ವತೆಗೆ ಹಾಗೂ ಅವಕಾಶವಾದಿತನಕ್ಕೆ ಸಾಕ್ಷಿಯಾಗಿವೆ. "ಅಖಂಡ ಭಾರತದೊಳಗೆ ಸುಂದರ ಕೊಡಗು" ಎನ್ನುವ ಘೋಷಣೆ ಕೂಗುವ ಈ ವಿಭಜನಕಾರಿ ಸಂಘಟನೆ ಪ್ರತ್ಯೇಕ ಕೊಡಗು ರಾಜ್ಯದ ಬೇಡಿಕೆಗಾಗಿ ವಿಶ್ವಸಂಸ್ಥೆಗೆ ನೇರವಾಗಿ "ನ್ಯಾಯ"ಕ್ಕಾಗಿ ಈಗಾಗಲೇ ಮೊರೆ ಹೊಕ್ಕಿದೆ. ಬ್ರಿಟಿಷ್ ವಸಾಹತುಶಾಹಿಗಳ ವಿರುದ್ಧ

ದುಡಿಯುವ ವರ್ಗಗಳು, ರೈತರು, ಕಾರ್ಮಿಕರು, ಕ್ರಾಂತಿಕಾರಿಗಳು ಹಾಗೂ ಉದಾರವಾದಿಗಳ ಹೋರಾಟದಿಂದ ಗಳಿಸಿದ ಸ್ವತಂತ್ರ ಭಾರತದ ರಾಷ್ಟ್ರೀಯ ಪ್ರಶ್ನೆಗಳಿಗೆ ಉತ್ತರವನ್ನು ಪಡೆಯಲು ಅಮೇರಿಕ ಸಾಮ್ರಾಜ್ಯಶಾಹಿಗಳ ಉಸ್ತುವಾರಿಯಲ್ಲಿರುವ ವಿಶ್ವಸಂಸ್ಥೆಗೆ ಮೊರೆ ಹೊಕ್ಕಿರುವುದು ಈ ನಿಟ್ಟಿನಲ್ಲಿ ಗಮನಾರ್ಹವಾದುದು.

ಯಾವುದೇ ರೀತಿಯ ಪ್ರಜಾಸತ್ತಾತ್ಮಕ ಮಾತುಕತೆಗೆ ಸಿದ್ಧವಿಲ್ಲದ ಈ ಸಂಸ್ಥೆ ತನ್ನ ವಿಮರ್ಶಕರನ್ನು ಹಾಗೂ ಪತ್ರಿಕೆಗಳನ್ನು ಮಟ್ಟ ಹಾಕುವ ಫಾಸಿಸ್ಟ್ ಧೋರಣೆಯನ್ನು ಮೈಗೂಡಿಸಿಕೊಂಡಿದೆ. ೧೯೯೭ರ ನವೆಂಬರ್ ೨೬ರಂದು ಆಂದೋಲನ ಪತ್ರಿಕೆಯ ಮಡಿಕೇರಿ ಆವೃತ್ತಿಯ ಸಾವಿರಾರು ಪ್ರತಿಗಳನ್ನು ಬಲಾತ್ಕಾರವಾಗಿ ಸುಟ್ಟುಹಾಕಿರುವುದು ಮತ್ತು ಪತ್ರಿಕಾ ಕಛೇರಿ ಸ್ಫೋಟಿಸುವ ಬೆದರಿಕೆ ಹಾಕಿರುವುದು ಕೆ.ಆರ್.ಎಂ.ಎಂ.ನ ಫಾಸಿಸ್ಟ್ ಧೋರಣೆಗೆ ಸಂಕೇತವಾಗಿದೆ. ಕೆ.ಆರ್.ಎಂ.ಎಂ.ನ ಗೂಂಡಾಗಿರಿಯನ್ನು ಪ್ರಶ್ನಿಸಿದ ಪ್ರಜ್ಞಾವಂತರ ಮೇಲೆ ಮಾರಣಾಂತಿಕ ಹಲ್ಲೆಗಳಾಗಿವೆ. ಹಲ್ಲೆಗೊಂಡವರು ಪ್ರತಿಭಟಿಸಿದರೆ ವ್ಯವಸ್ಥಿತವಾಗಿ ಚಾರಿತ್ರ್ಯವಧೆಯನ್ನೂ ಮಾಡಲಾಗುತ್ತಿದೆ. ಕೆ.ಆರ್ .ಎಂ.ಎಂ.ನ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಈಗಾಗಲೇ ವಿಶ್ವವಿದ್ಯಾಲಯಗಳ ಹಾಗೂ ಕರ್ನಾಟಕದ ಅನೇಕ ವಿದ್ವಾಂಸರು ಟೀಕಿಸಿದ್ದಾರೆ. ವೃತ್ತ ಪತ್ರಿಕೆಗಳ ಸಂಪಾದಕರು, ಅಂಕಣಕಾರರು ಕೂಡ ಈ ರೀತಿಯ ಬೇಡಿಕೆ ಸಮಂಜಸವಾದುದಲ್ಲವೆಂದಿದ್ದಾರೆ.ಅದೇ ರೀತಿ ಹಿಂದುಳಿದ ಕೊಡಗನ್ನು ''ಅಭಿವೃದ್ಧಿ''ಗೊಳಿಸುವ ಯೋಜನೆಯನ್ನು ಅನುಷ್ಠಾನಗೊಳಿಸಬೇಕೆಂದು ಕರ್ನಾಟಕ ಸರ್ಕಾರವನ್ನು ಒತ್ತಾಯಿಸಿದ್ದಾರೆ (ಇದರ ಬಗ್ಗೆ ಪ್ರಬಂಧದ ಮುಂದಿನ ಪುಟಗಳಲ್ಲಿ ಚರ್ಚಿಸಲಾಗಿದೆ). ಆದರೆ ಕೆ.ಆರ್.ಎಂ.ಎಂ. ಈ ಟೀಕೆಗಳಿಗೆ ಉತ್ತರ ಕೊಡಲು ಸಮರ್ಥವಾಗದೆ

> ನಮ್ಮ ವಿರುದ್ಧ ಕೆಸರು ಎರಚುವ ಕೃತ್ಯಕ್ಕೆ ಮೈಸೂರು, ಬೆಂಗಳೂರಿನಲ್ಲಿ ಕೇಂದ್ರಿಕೃತಗೊಂಡಿರುವ ಬುದ್ಧಿಜೀವಿಗಳನ್ನು, ಅಕಾಡೆಮಿಗಳ ಮುಖಂಡರನ್ನು, ಸಾಹಿತಿಗಳನ್ನು, ವಿಶ್ವವಿದ್ಯಾನಿಲಯಗಳ ಮಾಸ್ ಕಮ್ಯುನಿಕೇಶನ್ ವಿಭಾಗಗಳನ್ನು, ಸರ್ಕಾರಿ ಸ್ವಾಮ್ಯದ ಸುದ್ಧಿ ಮಾಧ್ಯಮಗಳನ್ನು, ವೃತ್ತಿನಿರತ ಅಂಕಣಕಾರರನ್ನು, ಬರಹಗಾರರನ್ನು, ವಿಶ್ವವಿದ್ಯಾನಿಲಯಗಳ ಸಂಶೋಧಕರನ್ನು, ವಿಭಿನ್ನ ಸಮುದಾಯದ ಮುಖಂಡರನ್ನು, ಹತಾಶ ರಾಜಕೀಯ ಪುಡಾರಿಗಳನ್ನು, ರಾಜಕೀಯ ಅಲೆಮಾರಿಗಳನ್ನು ಹೀಗೆ ಎಲ್ಲರನ್ನೂ ಬಾಡಿಗೆಗೆ ಪಡಕೊಂಡು ರಾಜ್ಯ ಹೋರಾಟವನ್ನು ಏನೇನೂ ಇಲ್ಲವೆಂದು ಜರೆದು ಕೊಡಗಿನ ಜನರ ಮೇಲೆ ಪ್ರಹಾರ ನಡೆಸಲು ಸರ್ಕಾರ ಮುಂದಾಗಿದ್ದು, ಇದೀಗ ನಮ್ಮನ್ನು ಬೆದರಿಸಿ 'ಬ್ಲಾಕ್ ಮೇಲ್' ಮಾಡಲು ನೋಡುತ್ತಿದೆ

ಎಂದು ತನ್ನ ಬೌದ್ಧಿಕ ದಿವಾಳಿತನವನ್ನು ತೋರಿಸಿದೆ. ಈ ಪ್ರತ್ಯೇಕತಾವಾದಿಗಳು ಘೋಷಿಸುತ್ತಿರುವ "ಪ್ರತ್ಯೇಕ ಕೊಡಗು ರಾಜ್ಯ"ದ ಸಿದ್ಧಾಂತಗಳು ಹೇಗೆ ಕೊಡಗಿನ ಎಲ್ಲಾ ಸಮುದಾಯಗಳ ಶೋಷಿತರ, ಹಿಂದುಳಿದ ವರ್ಗಗಳ, ದಲಿತರ ಹಾಗೂ ದುಡಿಯುವ ಸಮುದಾಯಗಳ ಅಸ್ತಿತ್ವಕ್ಕೆ ಮಾರಕವಾಗಿವೆ ಎಂಬುದನ್ನು ಈ ಪ್ರಬಂಧದಲ್ಲಿ ಮುಂದೆ ವಿವರಿಸಲು ಪ್ರಯತ್ನಿಸಲಾಗಿದೆ.

ಕೊಡಗಿನ "ಮೂಲನಿವಾಸಿಗಳೆಲ್ಲರನ್ನು" ಪ್ರತಿನಿಧಿಸುತ್ತಿದ್ದೇವೆಂಬ ಘೋಷಣೆಯನ್ನು ಮಾಡುತ್ತಿರುವ ಪ್ರತ್ಯೇಕವಾದಿ ಕೆ.ಆರ್.ಎಂ.ಎಂ. "ವಲಸೆಗಾರರನ್ನು" ನಿರ್ಮೂಲ ಮಾಡುವ ಫಾಸಿಸ್ಟ್ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಆಶ್ಚರ್ಯವೆಂದರೆ ಕೊಡಗಿನ 'ಮೂಲನಿವಾಸಿ ಪಟ್ಟಿ'ಯಲ್ಲಿರುವ ಹಿಂದುಳಿದ ೧೭ ಕೊಡವ ಭಾಷಿಕ ಸಮುದಾಯಗಳನ್ನು; ಕೊಡಗಿನ ಜನಸಂಖ್ಯೆಯಲ್ಲಿ ಶೇ.೩೦ರಷ್ಟಿರುವ ಕೊಡಗಿನ ಕನ್ನಡಿಗರನ್ನು ಹಾಗೂ ಕೊಡಗಿನ ಮಣ್ಣಿನ ಸುಮಾರು ೨೨ ದಲಿತ ಸಮುದಾಯಗಳನ್ನು ಕೆ.ಆರ್.ಎಂ.ಎಂ. ಯಾವ ಅರ್ಥದಲ್ಲಿ ಪ್ರತಿನಿಧಿಸುತ್ತಿದೆ ಎಂದು ಸ್ಪಷ್ಟೀಕರಿಸಲು ಇಂದಿಗೂ ವಿಫಲವಾಗಿದೆ. ಮಾತುಮಾತಿಗೂ ಮಹಾತ್ಮಗಾಂಧಿ, ಫಿಡೆಲ್ ಕಾಸ್ಟ್ರೋ, ನೆಲ್ಸನ್ ಮಂಡೇಲಾರನ್ನು ತನ್ನ ಸಿದ್ಧಾಂತದ ಸಮರ್ಥನೆಗಾಗಿ ಉಲ್ಲೇಖಿಸುವ ಈ ಮೂಲಭೂತವಾದಿ ಸಂಘಟನೆ ಕೊಡಗಿನಲ್ಲಿ ಶತಮಾನಗಳಿಂದ ನೆಲಸಿರುವ ದುಡಿಯುವ ಸಮುದಾಯಗಳನ್ನು "ವಲಸೆಗಾರರು" ಎಂದು ಜರೆಯುತ್ತಿರುವುದರಿಂದ ದುಡಿಯುವ ಸಮುದಾಯಗಳನ್ನು ಪ್ರತಿನಿಧಿಸಲು ಸಾಧ್ಯವಿಲ್ಲವಾಗಿದೆ.

ಆದುದರಿಂದ ಈ ಚರ್ಚೆಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಇಲ್ಲಿ ವಿಮರ್ಶಿಸುವುದು ಸೂಕ್ತ. "ವಲಸೆಗಾರರನ್ನು" ನಿರ್ಮೂಲ ಮಾಡಿ, ಕೊಡಗು ರಾಜ್ಯವನ್ನು ಸ್ಥಾಪಿಸಿ "ಮೂಲನಿವಾಸಿಗಳನ್ನು" ಉಳಿಸಲು ಕೊಡಗು ರಾಜ್ಯ ಮುಕ್ತಿ ಮೋರ್ಚಾ ಈಗಾಗಲೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಹಿನ್ನೆಲೆಯಲ್ಲಿ ಕೊಡಗಿನ ಮೂಲನಿವಾಸಿಗಳೆಂದರೆ ಯಾರು ಮತ್ತು ಈ ಮೂಲನಿವಾಸಿಗಳಿಗೂ ೧೮೩೪ರ ಹಿಂದಿನ "ರಾಮರಾಜ್ಯ"ದ ಜೊತೆಗಿದ್ದ ಸಂಬಂಧವೇನು ಎನ್ನುವುದನ್ನೂ ಈ ಲೇಖನ ವಿವರಿಸುತ್ತದೆ. ಹಾಗೆಯೇ "ವಲಸೆಗಾರರು" ಯಾರು ಹಾಗೂ ಇವರಿಗೂ ಕೊಡಗಿನ ಚರಿತ್ರೆಗೂ ಇರುವ ಸಂಬಂಧವೇನು ಎಂಬುದನ್ನು ಈ ಲೇಖನ ಪರಿಶೀಲಿಸುತ್ತದೆ. ಅಲ್ಲದೆ, ಕೊಡಗಿನ ಮಣ್ಣಿನಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಸಮಾಜ ವಿರೋಧಿ ಮೂಲಭೂತವಾದಿ ಶಕ್ತಿಗಳು ಸ್ವಂತ ಲಾಭಕ್ಕಾಗಿ ಇತಿಹಾಸವನ್ನು ತಿರುಚಿರುವ ಕೆಲವು ಘಟನೆಗಳನ್ನು ಕೆಲವೆಡೆ ಪ್ರಸ್ತಾಪಿಸಲಾಗಿದೆ. ಕರ್ನಾಟಕದೊಂದಿಗಿನ "ವಿಲೀನ ಪೂರ್ವ

ಅವಧಿ''ಯಲ್ಲಿ ಅಂದರೆ ೧೯೫೬ಕ್ಕಿಂತ ಮೊದಲು ಕೊಡಗಿನ ''ಮೂಲನಿವಾಸಿ''ಗಳು ''ಸುಖೀ ರಾಜ್ಯ'' ಹೊಂದಿದ್ದರು ಹಾಗೂ ೧೯೫೬ರ ನಂತರ ''ಕರ್ನಾಟಕದ ಸಾಮ್ರಾಜ್ಯಷಾಹಿಗಳು ಹಾಗೂ ವಲಸೆಗಾರರಿಂದಾಗಿ ಕೊಡಗು ''ಅವನತಿ''ಗೆ ಸಾಗಿದೆ ಎನ್ನುವ ಕೆ.ಆರ್.ಎಂ.ಎಂ.ನ ಏಕಸೂತ್ರದ ವಾದಗಳನ್ನು ಈ ಸಂದರ್ಭದಲ್ಲಿ ವಿಮರ್ಶಿಸುವುದು ತೀರಾ ಅಗತ್ಯವಾಗಿದೆ.

## ಪ್ರತ್ಯೇಕ ಕೊಡಗು ರಾಜ್ಯ ಮತ್ತು ಮೂಲನಿವಾಸಿಗಳು

### ಕೊಡಗಿನ ಮೂಲನಿವಾಸಿಗಳು ಯಾರು ?

ಬೇರೆ ಬೇರೆ ಕಡೆ ಈಗಾಗಲೇ ಕೊಡಗಿನವರ ಬಗ್ಗೆ ಒಂದು ಸ್ಟೀರಿಯೋಟೈಪ್ ಪ್ರಚಲಿತವಾಗಿದೆ. ಸೂಟು-ಬೂಟು ಹಾಕಿ ದೊಡ್ಡ ಮೀಸೆ ಬಿಟ್ಟು ಮಾರುತಿ, ಟಾಟಾ ಸಿಯಾರಾ, ಸುಮೋ.... ಇತ್ಯಾದಿ ಕಾರುಗಳಲ್ಲೇ ಜೀವಿಸುವವರು; ಅವರ ಶ್ರೀಮಂತ ಎಸ್ಟೇಟುಗಳು ಅಥವಾ ಅವರಲ್ಲಿರುವ ಆಗರ್ಭ ಶ್ರೀಮಂತಿಕೆ; ಅವರು ಸರ್ಕಾರಕ್ಕೆ ನೀಡುವ ದೊಡ್ಡ ತೆರಿಗೆ ಹಣವನ್ನು ಕುರಿತ ವರ್ಣರಂಜಿತ ಚಿತ್ರ ಇತ್ಯಾದಿ (''ತೆರಿಗೆ''ಗೆ ಸಂಬಂಧಿಸಿದ ವಿವರಗಳನ್ನು ಲೇಖನದ ಕೊನೆಯ ಭಾಗದಲ್ಲಿ ಚರ್ಚಿಸಲಾಗಿದೆ). ಅವರು ಕೊಡುವ ''ತೆರಿಗೆ'' ಮಾತ್ರ ಕೊಡಗಿನ ಮುಖವಲ್ಲ. ಕೊಡಗಿನ ಉದ್ಧಾರ ಎಂದರೆ ''ಕೊಡಗಿನ ರಸ್ತೆಗಳನ್ನು ಚಿನ್ನದ ತಗಡಿನಿಂದ ಮಾಡಿಸಿ'' ಅದರಲ್ಲಿ ತಮ್ಮ ಹೈಟೆಕ್ ವಾಹನಗಳನ್ನು ಓಡಿಸುವುದು ಮಾತ್ರ ಎಂದು ತಿಳಿದುಕೊಂಡಿರುವ ಅಲ್ಪ ಸಂಖ್ಯಾತ ವರ್ಗ ಅದು (ಕೆ.ಆರ್.ಎಂ.ಎಂ.ನ ಸಾರ್ವಜನಿಕ ಭಾಷಣಗಳಲ್ಲಿ ಆಗಾಗ್ಗೆ ಪ್ರಸ್ತಾಪಿಸಲಾಗುವಂತೆ). ಈ ವರ್ಗ ಕೊಡಗಿನ ಬಹುಸಂಖ್ಯಾತ ಸಮುದಾಯಗಳನ್ನು ಪ್ರತಿನಿಧಿಸುವುದಿಲ್ಲ. ಹೀಗೆಯೇ ಬ್ರಿಟಿಷರಿಂದ ಬಳುವಳಿ ಪಡೆದ ''ನೆಕ್ ಟೈ''ಯನ್ನು ಕುಪ್ಪಿಯ (ಗಂಡಸರ ಸಾಂಪ್ರದಾಯಿಕ ನಿಲುವಂಗಿ) ದಿರಿಸಿನೊಂದಿಗೆ ಧರಿಸಿ ಎಡೆಬಿಡಂಗಿಯಂತೆ ಕಾಣುವವರು ಇಲ್ಲವೇ 'ಟೈ' ಯನ್ನು ಧರಿಸದೆ ಕುಪ್ಪಿಯ ಧರಿಸಿ ಕ್ಷಣಿಕ ರಾಜಕೀಯ ಪ್ರಚಾರಕ್ಕಾಗಿ ಕತ್ತಿ, ಕೋವಿ ಹಿಡಿದು ಬೀದಿಯಲ್ಲಿ ಮೆರವಣಿಗೆ ಮಾಡುವವರು ಕೊಡಗಿನ ಸಂಸ್ಕೃತಿಗೆ ಉದಾಹರಣೆಯಾಗುವುದಿಲ್ಲ.

ಕೊಡಗಿನ ಸಾಂಸ್ಕೃತಿಕ ವೈಶಿಷ್ಟ್ಯಗಳು ಇಂದು ದೇಶದ ಮೂಲೆಮೂಲೆಗೂ ತಲುಪಿದ್ದರೆ ಅದಕ್ಕೆ ಮುಖ್ಯ ಕಾರಣ ಕೊಡಗಿನ ಜನರಲ್ಲಿ ಅತ್ಯಂತ ಸ್ವಾಭಾವಿಕವಾಗಿ ಮನೆ ಮಾಡಿರುವ ಹೃದಯ ವೈಶಾಲ್ಯತೆ. ಈ ರೀತಿ ಹೃದಯ ವೈಶಾಲ್ಯತೆಗೆ ಹೆಸರಾದವರು ಖಂಡಿತವಾಗಿಯೂ-ಹಗಲಿರುಳು ತಮ್ಮ ತಮ್ಮ ತೋಟಗಳಲ್ಲಿ, ಗದ್ದೆಗಳಲ್ಲಿ ದುಡಿದು

ನಿಜವಾದ ಅರ್ಥದಲ್ಲಿ-ಮಣ್ಣಿನ ಮಕ್ಕಳಾದವರು. ಇಂಥವರು ಸಹಜವಾಗಿಯೇ ತಮ್ಮ ಸಂಸ್ಕೃತಿಯ ಬಗ್ಗೆ ಕೂಡ ಅಭಿಮಾನದಿಂದ ಇರುವವರು. ಯಾವುದೋ ರಾಜಕೀಯ ಲಾಭಕ್ಕಾಗಿ, ಅಧಿಕಾರಕ್ಕಾಗಿ ಸರಕಾರದಿಂದ ಬರುವ ಆರ್ಥಿಕ ಸವಲತ್ತುಗಳಿಗಾಗಿ ವ್ಯಾಪಾರಕ್ಕೆ ಹೊರಟವರಂತೆ ಕೊಡಗಿನ ಸಂಸ್ಕೃತಿಯ ಅಭಿವ್ಯಕ್ತಿಗಳಾದ ''ಕುಪ್ಪಿಯ ಚ್ಯಾಲೆ, ಮಂಡೆ ತುಣಿ (ರುಮಾಲು), ಪೀಚೆ ಕತ್ತಿ, ಒಡಿ ಕತ್ತಿ'' ಇತ್ಯಾದಿಗಳನ್ನು ಬೀದಿಯಲ್ಲಿ ಪ್ರದರ್ಶನಕ್ಕೆ ಇಡದ ಜನ ಇವರು. ಈ ವರ್ಗದ ಜನರೇ ಕೊಡಗಿನಲ್ಲಿ ಬಹುಸಂಖ್ಯಾಕರೆಂದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಕೊಡಗಿನ ಕೊಡವ, ಗೌಡ, ಅಮ್ಮಕೊಡವ, ಹೆಗ್ಗಡೆ, ಐರಿ, ಕೋಯವ, ಗೊಲ್ಲರಂತಹ ಭೂ ಹಿಡುವಳಿ ಹೊಂದಿರುವ ಸಮುದಾಯಗಳು, ಕೆಂಬಟ್ಟಿ ಸಮುದಾಯದಂತಹ ಭೂರಹಿತ ಸಮುದಾಯಗಳು ಈ ವರ್ಗದಲ್ಲಿ ಬರುತ್ತವೆ. ಇವರೆಲ್ಲರನ್ನೂ ವಿಶಾಲಾರ್ಥದಲ್ಲಿ ''ಮೂಲನಿವಾಸಿಗಳು'' ಎಂದು ಗುರುತಿಸಲಾಗುತ್ತದೆ. ನಮ್ಮ ಮುಂದಿರುವ ಪ್ರಶ್ನೆ ''ಪ್ರತ್ಯೇಕ ಕೊಡಗು ರಾಜ್ಯ''ವನ್ನು ಪ್ರತಿಪಾದಿಸುತ್ತಿರುವ ಕೊಡಗು ರಾಜ್ಯ ಮುಕ್ತಿ ಮೋರ್ಚಾ ಯಾವ ಅರ್ಥದಲ್ಲಿ ಈ ಮೂಲನಿವಾಸಿಗಳನ್ನು ಪ್ರತಿನಿಧಿಸುತ್ತದೆ ಎನ್ನುವುದು.

**ಪ್ರತ್ಯೇಕ ರಾಜ್ಯ ಕೇಳುವ ಹಕ್ಕನ್ನು ''ಮೂಲನಿವಾಸಿಗಳು'' ಯಾರಿಗಾದರೂ ಕೊಟ್ಟಿದ್ದಾರೆಯೇ?**

ಬಾರಿಬಾರಿಗೂ ಕೊಡಗು ರಾಜ್ಯ ''ಕೊಡಗು ಮೂಲನಿವಾಸಿಗಳ ಹಕ್ಕು'' ಎಂದು ಪುನರುಚ್ಚಿಸುವ ಕೆ.ಆರ್.ಎಂ.ಎಂ.ನ ಏಕೈಕ ವಕ್ತಾರ ಎನ್.ಯು. ನಾಚಪ್ಪನವರಿಗೆ ಕೊಡಗಿನ ಹದಿನೇಳು ಸಮುದಾಯಗಳ ಜನರು ಯಾವಾಗ ಅಂತಹ ಹಕ್ಕನ್ನು ಕೊಟ್ಟರು ಎಂದು ಇಂದಿಗೂ ನಮಗೆ ತಿಳಿಯದಾಗಿದೆ. ಕೊಡಗಿನ ದಲಿತ, ಹಿಂದುಳಿದ ವರ್ಗ ಹಾಗೂ ದುಡಿಯುವ ಸಮುದಾಯಗಳನ್ನು ಪ್ರತಿನಿಧಿಸುವ ಕೊಡಗು ಪ್ರಜಾವೇದಿಕೆ ೧೯೯೭ರ ಅಕ್ಟೋಬರ್ ತಿಂಗಳಲ್ಲಿ ಈ ಪ್ರಶ್ನೆಯನ್ನು ಕೇಳಿತ್ತು. ಕೊಡವ ಭಾಷಿಕ ಸಮುದಾಯಗಳ ಸಂಘಟನೆಯಾದ ಕೊಡಗು ಮೂಲನಿವಾಸಿಗಳ ಸಂಘಟನೆ ೧೯೯೬ರಲ್ಲಿ ಇದೇ ಪ್ರಶ್ನೆಯನ್ನು ಎತ್ತಿತ್ತು. ಆದರೂ ಈ ವಿಷಯಕ್ಕೆ ಸಂಬಂಧಿಸಿದಂತೆ ಇವರ ''ದಿವ್ಯಮೌನ'' ಅನೇಕ ಸಂಶಯಗಳಿಗೆ ಎಡೆಗೊಡುತ್ತದೆ. ಇದರೊಂದಿಗೆ ಈ ಕೆ.ಆರ್.ಎಂ.ಎಂ.ನ ವಕ್ತಾರ ೧೯೯೭ರ ಆಗಸ್ಟ್ ೩೦ರಂದು ದೆಹಲಿಯಲ್ಲಿ ರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿಗಳಿಗೆ ಮನವಿ ಅರ್ಪಿಸಿ, ''ಕೊಡವರಿಗೆ ಪ್ರತ್ಯೇಕ ರಾಜ್ಯ''ದ ಬೇಡಿಕೆ ಮುಂದಿಟ್ಟಿದ್ದಾರೆ.

''೧೯೫೬ಕ್ಕಿಂತ ಹಿಂದೆ ಕೊಡಗಿನ ಜನ ಸುಖೀ ರಾಜ್ಯದಲ್ಲಿದ್ದರು. ಅದೊಂದು

ರಾಮರಾಜ್ಯವಾಗಿತ್ತು'' ಎಂದು ಕೆ.ಆರ್.ಎಂ.ಎಂ. ಹೇಳುವುದು ಒಂದರ್ಥದಲ್ಲಿ ನಿಜ. ಏಕೆಂದರೆ ಬ್ರಿಟಿಷ್ ಆಳರಸರ ಸೇವಕ ವರ್ಗವಾಗಿದ್ದ ಕೊಡಗಿನ ಕೆಲವು ಮನೆತನಗಳಿಗೆ, ಎಸ್ಟೇಟ್ ಮಾಲೀಕ ವರ್ಗದವರಿಗೆ ''ಪ್ರತ್ಯೇಕ ರಾಜ್ಯ'' ಯಾವತ್ತೂ ''ರಾಮರಾಜ್ಯ'' ವಾಗಿತ್ತು. ಇತರೆ ಕೊಡವರು, ಮೂಲನಿವಾಸಿ ಸಮುದಾಯಗಳು ಅಥವಾ ದುಡಿಯುವ ಸಮುದಾಯಗಳು ತಮ್ಮ ಬೆವರು ಮತ್ತು ರಕ್ತವನ್ನು ಹರಿಸಿ ಭೌಗೋಳಿಕವಾಗಿ ಹಾಗೂ ರಾಜಕೀಯವಾಗಿ ಅಂದಿನ ಕೊಡಗು ಉಳಿದುಕೊಳ್ಳಲು ಕಾರಣವಾದವು. ಆ ''ರಾಮರಾಜ್ಯ''ದ ಫಲಗಳನ್ನು ಬ್ರಿಟಿಷ್ ಸೇವಕರಾಗಿದ್ದ ಮೇಲ್ವರ್ಗದವರು ಅನುಭವಿಸುತ್ತಿದ್ದರು. ಈಗ ಅಂತಹದೇ ''ರಾಮರಾಜ್ಯ'' ವನ್ನು ಮರುಸ್ಥಾಪಿಸುವುದಾಗಿ ಹೇಳುತ್ತಿರುವ ಈ ಫಾಸಿಸ್ಟ್‌ಗಳ ಕರೆ ನಮ್ಮನ್ನು ದಂಗು ಬಡಿಸುತ್ತದೆ. ಏಕೆಂದರೆ ಇವರ ರಾಮರಾಜ್ಯದಲ್ಲಿ ಫಲಗಳನ್ನು ಅನುಭವಿಸುವವರು ಯಾರು, ಅದಕ್ಕಾಗಿ ದುಡಿಯುವವರು ಯಾರು ಎನ್ನುವುದು ಸ್ಪಷ್ಟವಾಗಿಯೇ ಇದೆ. ಇವರು ಹೇಳುವಂಥ ''ಶಾಂತಿ-ಸಮೃದ್ಧಿ-ನೆಮ್ಮದಿ'' ತುಂಬಿದ್ದ ಅಂದಿನ ಕೊಡಗಿನ ''ರಾಮರಾಜ್ಯ''ದ ದರ್ಬಾರಿನ ಕೆಲವು ಸ್ಯಾಂಪಲ್‌ಗಳನ್ನು ಹೀಗೆ ವಿವರಿಸಬಹುದು.

## "ಸುಖೀರಾಜ್ಯ" ಮತ್ತು ಭೂರಹಿತ ಸಮುದಾಯದ ಮೂಲನಿವಾಸಿಗಳು

**ಸುಖೀರಾಜ್ಯದಲ್ಲಿ ಗುಲಾಮರು:**

ಕಳೆದ ಶತಮಾನದವರೆಗೂ ಕೆಂಬಟ್ಟಿ, ಎರವ ಮತ್ತು ಹೊಲಯರಂಥ ಸುಮಾರು ಇಪ್ಪತ್ತೆರಡು ಸಮುದಾಯಗಳು ಕೊಡಗಿನ ಭೂ ಒಡೆಯರ (ಪ್ರಮುಖವಾಗಿ ''ಜಮ್ಮ'' ಭೂಮಿಯ ಒಡೆತನ ಹೊಂದಿರುವ ಎಲ್ಲಾ ''ಮೂಲ ನಿವಾಸಿಗಳು'') ಮನೆಗಳಲ್ಲಿ, ಕೊಟ್ಟಿಗೆಗಳಲ್ಲಿ, ತೋಟಗಳಲ್ಲಿ ಅಧಿಕೃತವಾಗಿ ಗುಲಾಮರಾಗಿ ಕೆಲಸ ಮಾಡುತ್ತಿದ್ದವು. ಅವರನ್ನು ಹಣಕ್ಕಾಗಿ ಸಂತೆಯಲ್ಲಿ ದನಕರುಗಳ ರೀತಿ ಮಾರಾಟ ಮಾಡಲಾಗುತ್ತಿತ್ತು. ಈ ಗುಲಾಮ ವರ್ಗದವರ ಮದುವೆ ಕೂಡ ಭೂ ಒಡೆಯರ ಪ್ರಮುಖ ವ್ಯಾಪಾರವಾಗಿತ್ತು. ಈ ಗುಲಾಮ ಸಮುದಾಯಗಳಿಗೆ ಸೇರಿದ ದಂಪತಿಗಳ ಹಸುಳೆಗಳನ್ನು ಯಾರ್‍ಯಾರು ಎಷ್ಟೆಷ್ಟು ಹೊಂದಬೇಕೆನ್ನುವುದನ್ನು ಮಾಲೀಕ ವರ್ಗದವರೇ ಮದುವೆಗಿಂತ ಮೊದಲು ನಿರ್ಧರಿಸುತ್ತಿದ್ದರು. ಕೊಡಗಿಗೆ ಬ್ರಿಟಿಷರು ಬಂದ ಒಂಭತ್ತು ವರ್ಷಗಳ ತರುವಾಯ ೧೮೪೩ರ ಆ್ಯಕ್ಟ್ V ಎನ್ನುವಂತಹ ಕಾನೂನು ತಂದು ಗುಲಾಮಗಿರಿಯನ್ನು ನಿಷೇಧಿಸಿದರೂ ಇಂದಿಗೂ ಅದು ''ಸಂಸ್ಕೃತಿ''ಯ ಹೆಸರಿನಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಜೀವಂತಿಕೆಯಲ್ಲಿ ಇರುವುದು ನಾಚಿಕೆಗೇಡು ಎಂದು ಇಲ್ಲಿನ ಸಾಂಸ್ಕೃತಿಕ

ವಕ್ತಾರರಿಗೆ ಅನ್ನಿಸುವುದೇ ಇಲ್ಲ. ಕೊಡವ ''ಸಾಹಿತ್ಯ'' ಅಕಾಡೆಮಿ ೧೯೯೬ರಲ್ಲಿ ''ಕೊಡವ'' ಸಾಂಸ್ಕೃತಿಕ ಮೇಳವನ್ನು ಜರುಗಿಸಿ ಕೆಂಬಟ್ಟಿ ಹಾಗೂ ಕುಡಿಯರಿಗೆ ಮಾತ್ರ ಪ್ರತ್ಯೇಕ ''ಆಟ್-ಪಾಟ್'' (ಕುಣಿಯುವ-ಹಾಡುವ) ಸ್ಪರ್ಧೆ ಏರ್ಪಡಿಸಿ ಕೊಡಗಿನ ಮನುಷ್ಯ ಸಂಸ್ಕೃತಿಗೆ ಸಗಣಿ ಸಾರಿಸಿದ್ದನ್ನು ಕೊಡಗಿನ ಮೂಲನಿವಾಸಿಗಳ ''ಸುಖ-ಶಾಂತಿ ಸಮೃದ್ದಿ'' ಗಾಗಿ ಜೀವ ಕೊಡುತ್ತೇನೆ ಮತ್ತು ''ಮೂವತ್ತು ವರ್ಷ ಜೈಲಿನಲ್ಲಿ ಕೂರುತ್ತೇನೆ'' ಎಂದು ಮಹಾತ್ಮ ಗಾಂಧಿ ಹೆಸರು ಹೇಳಿ ರಾಜಕೀಯ ಮಾಡುವ ಮಂದಿ ಕಣ್ಣು ಮುಚ್ಚಿ ತಮಾಷೆ ನೋಡುತ್ತಿದ್ದದ್ದು ಹಾಸ್ಯಾಸ್ಪದವಾಗಿತ್ತು. ಕೊಡಗರಾದ ಕೆಂಬಟ್ಟಿಗಳು ತಮಗೆ ವಿದ್ಯೆ ಕೊಟ್ಟು ಎಲ್ಲರಂತೆ ಬದುಕಲು ಅವಕಾಶವಾಗುವ ಹಾಗೆ ಮೀಸಲಾತಿಯಲ್ಲಿ ತಮ್ಮ ಸಮೂದಾಯದ ಹೆಸರನ್ನು ಸೇರಿಸಬೇಕೆಂದು ಕಳೆದ ಇಪ್ಪತ್ತು ವರ್ಷಗಳಿಂದ ಮೊರೆಯಿಡುತ್ತಿದ್ದಾರೆ. ಆದರೆ ಈ ಕೊಡವ ಅಕಾಡೆಮಿ ''ಸಂಸ್ಕೃತಿ'' ಉಳಿಸಲು ಅವರಿಗೆ ಸರಕಾರದ ಬೊಕ್ಕಸದಿಂದ ಮೂರು ಲಕ್ಷ ರೂಪಾಯಿಗಳ ವಾಲಗೋಪಕರಣಗಳನ್ನು ಮಾತ್ರ ಹಂಚಿತು. ಹೀಗೆ ಮಾಡಿ ಅವರನ್ನು ಶಾಶ್ವತವಾಗಿ ವಾಲಗದವರನ್ನಾಗಿ ಮಾಡಲು ಹೊರಟ ಹುನ್ನಾರದ ಹೇಸಿಗೆ ಇನ್ನೂ ಹಸಿ ಹಸಿಯಾಗಿದೆ. ಮೂಲನಿವಾಸಿಗಳ ಪಟ್ಟಿಯಲ್ಲಿರುವ ಈ ಸಮುದಾಯಗಳ ಸ್ವಾಭಿಮಾನಕ್ಕಾದ ಗಾಯದ ಬಗ್ಗೆ ''ಮೊಸಳೆಕಣ್ಣೀರು'' ಕೂಡ ಈ ಸ್ವಘೋಷಿತ ಮೂಲನಿವಾಸಿ ನಾಯಕರಿಗೆ ಬರದಿರುವುದು ವಿಷಾದನೀಯ. ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಮಹಾಶ್ವೇತದೇವಿಯವರು ''ಜಾರ್ಖಂಡ್ ಮುಕ್ತಿ ಮೋರ್ಛಾ''ದ ಹೋರಾಟವನ್ನು ಭೂಮಾಲೀಕರ ಹೋರಾಟವೆಂದು ಕರೆದು ಅದು ಹೇಗೆ ದಲಿತ ವಿರೋಧಿ, ಬುಡಕಟ್ಟು ಜನರ ವಿರೋಧಿ ಎಂದು ಇತ್ತೀಚೆಗೆ ವಿವರಿಸಿದ್ದ ವಿಚಾರ ಕೊಡಗಿನ ಮಟ್ಟಿಗೂ ಸತ್ಯವಾಗಿದೆ. ಭೂಮಾಲೀಕ ಪರ ಶಕ್ತಿಗಳು ಕೊಡಗಿನ ನೆಲದಲ್ಲೂ ಕೊಡಗಿನ ಬುಡಕಟ್ಟು ಜನರನ್ನು ಬಲಹೀನಗೊಳಿಸುತ್ತಿರುವುದನ್ನು ನಾವು ನಾಗರಹೊಳೆ ಪ್ರಕರಣದಲ್ಲಿ ಈಗಾಗಲೆ ನೋಡಿದ್ದೇವೆ. (ನಾಗರಹೊಳೆಯ ಬುಡಕಟ್ಟು ಜನರು ತಮ್ಮ ಹೋರಾಟಕ್ಕಾಗಿ ಊಳಿಗಮಾನ್ಯ ಮನೋಭಾವದ ಯಾವುದೇ ಹೋರಾಟಗಾರರನ್ನು ನೆಚ್ಚಿಕೊಳ್ಳದೆ ತಾವೇ ಸ್ವತಃ ಹೋರಾಡಿ ಸಫಲರಾದದ್ದನ್ನು ಹಾಗು ಅದನ್ನು ಭೂಮಾಲೀಕ ಪರ ಶಕ್ತಿಗಳು ನೋಡಿ ಕರಬುವುದನ್ನು ನಾವು ಈ ಸಂದರ್ಭದಲ್ಲಿ ಗಮನಿಸಬೇಕು).

## "ರಾಮರಾಜ್ಯ" ಮತ್ತು ಕೃಷಿಕ ಸಮುದಾಯದ ಮೂಲನಿವಾಸಿಗಳು

ಭಾಷೆ, ಉಡುಪು, ಸಂಪ್ರದಾಯ, ಒಕ್ಕ ಇತ್ಯಾದಿಗಳಲೆಲ್ಲಾ ನಮಗೆಲ್ಲಾ ಗೊತ್ತಿರುವಂತೆ ಕೊಡವ ಸಮುದಾಯದವರಿಗೂ ಮಿಕ್ಕ ಮೂಲನಿವಾಸಿ ಸಮುದಾಯ

ಗಳವರಿಗೂ ಏನೊಂದೂ ವ್ಯತ್ಯಾಸವಿಲ್ಲ. ಆದರೂ ಕುಟಿಲ ರಾಜಕಾರಣಿಗಳಿಂದಾಗಿ ಹಾಗೂ ಜಾತಿವಾದಿಗಳಿಂದಾಗಿ ಕೊಡವ ಸಾಹಿತ್ಯ ಅಕಾಡೆಮಿಗೆ ಬರೇ ಕೊಡವ ಸಮುದಾಯದವರನ್ನೇ ನಾಮಕರಣ ಮಾಡಿ ಉಳಿದವರನ್ನು ನಿರ್ಲಕ್ಷಿಸಲಾಯಿತು. ಕೊಡವ ಜಾತಿ ಸಂಘಟನೆಯಾದ ಕೊಡವ ಸಮಾಜದ ಬೆಂಗಳೂರು, ಮೈಸೂರು ಹಾಗೂ ಮಡಿಕೇರಿಯ ಅಧ್ಯಕ್ಷರನ್ನು ಅದರ ಶಾಶ್ವತ ಸದಸ್ಯರನ್ನಾಗಿ ಮಾಡಲಾಯಿತು. ಉಳಿದ ೧೭ ಮೂಲನಿವಾಸಿ ಕೊಡವ ಭಾಷಿಕ ಸಮುದಾಯಗಳನ್ನು (ದಲಿತರನ್ನೂ ಸೇರಿಸಿದಂತೆ) ಸರಕಾರಿ ಕೃಪಾ ಪೋಷಿತ ಕೊಡವ ಅಕಾಡೆಮಿಯಿಂದ ಸಂವಿಧಾನದ ಪರಿಧಿಯಲ್ಲೇ ಮೂಲೆಗೆ ತಳ್ಳಲಾಯಿತು. ಉಳಿದವರು ತಮಗೂ ಅವಕಾಶ ನೀಡಬೇಕೆಂದು ಸಲ್ಲಿಸಿದ ಮನವಿ ಸರಕಾರದ ಕಿವಿಗೆ ಕೇಳಿಸಲಿಲ್ಲ. ಕಾರಣ, ಇನ್ನೂ ಜೀವಂತವಾಗಿರುವ ಊಳಿಗಮಾನ್ಯ ಶಕ್ತಿಗಳು ತುಳಿತಕ್ಕೆ ಒಳಗಾದವರ ಸಾಂವಿಧಾನಿಕ ಹಕ್ಕನ್ನು ಕಸಿದುಕೊಂಡವು. ಕೊಡವ ಸಾಂಸ್ಕೃತಿಕ ಮೇಳವನ್ನು ಸಾರ್ವಜನಿಕ ತೆರಿಗೆ ಹಣದಲ್ಲಿ ನಡೆಸಿ ದುಂದು ವೆಚ್ಚ ಮಾಡಿದ್ದನ್ನು ಕೆ.ಆರ್.ಎಂ.ಎಂ.ಆಗಲೀ ಅಥವಾ ಅದರ ಏಕೈಕ ವಾರಸುದಾರರಾಗಲೀ ಪ್ರಶ್ನಿಸದಿರುವುದು ಇಂದೂ ಆಶ್ಚರ್ಯ ಎಂದೆನ್ನಿಸುವುದಿಲ್ಲ. ಏಕೆಂದರೆ ಭಾರತ ಸರಕಾರದ ಉನ್ನತ ಸ್ಥಾನದಲ್ಲಿದ್ದು ಇತ್ತೀಚೆಗೆ ನಿವೃತ್ತರಾದ ಚೋನಿರ ಮುತ್ತಮ್ಮ ಎಂಬುವರು ಕೊಡಗು ಪ್ರತ್ಯೇಕ ರಾಜ್ಯವಾದರೆ ಎಲ್ಲಾ ಅಧಿಕಾರ ಸ್ಥಾನಗಳೂ ಕೊಡವರಿಗೇ ಮೀಸಲಾಗಿರಬೇಕು ಎಂದು ದೊಣ್ಣೆ ನಾಯಕನ ಪಾತ್ರ ಮಾಡುವಾಗಲೂ ಈ ಮಹಾನುಭಾವರು ಜಾಣ ಮೌನವನ್ನು ಪ್ರದರ್ಶಿಸಿದರು. ಕೊಡಗಿನ ೧೭ ಕೊಡವ ಭಾಷಿಕ ಮೂಲನಿವಾಸಿ ಸಮುದಾಯಗಳಲ್ಲಿ ಕೊಡವರು ಒಂದು ಸಮುದಾಯ ಎಂಬುದನ್ನು ಇಲ್ಲಿ ಗಮನಿಸಬೇಕು. ವಿಶಾಲ ಹೃದಯವಂತಿಕೆಗೆ ಹೆಸರಾದ ಕೊಡಗಿನಲ್ಲಿ ಜಾತಿ ರಾಜಕೀಯದಿಂದ ಗಿಟ್ಟುವ ಸವಲತ್ತುಗಳು ಹಾಗೂ ರಾಜಕೀಯ ಅಧಿಕಾರದ ಲಾಲಸೆಗಾಗಿ ಏನನ್ನೂ ಬೇಕಾದರೂ ಮಾಡಲು ಕೆಲವು ಜನರು ಸೇರಿದ್ದು ತೀರಾ ದುರದೃಷ್ಟಕರ. ಕೆ.ಆರ್.ಎಂ.ಎಂ.ಗೆ ಈ ರೀತಿಯ ಜಾಣ ಮೌನ ಒಂದು ವರದಾನವಾಗಿ ಪರಿಣಮಿಸಿದರೆ ಆಶ್ಚರ್ಯವೇನಿಲ್ಲ. ಕೊಡಗಿನ ಭವ್ಯವಾದ ಸಂಸ್ಕೃತಿ ಹಾಗೂ ಅದರೊಂದಿಗೆ ಬೆಸೆದಿರುವ ಇತಿಹಾಸ ಕೂಡ ಶತಮಾನಗಳಿಂದ ಇದನ್ನೇ ಹೇಳುತ್ತದೆ.

ಕೊಡಗಿನಲ್ಲಿ ಗುಲಾಮಿ ಪದ್ಧತಿಯನ್ನು ಓಡಿಸಲು ೧೮೪೩ರ ಆ್ಯಕ್ಟ್ V ರಂಥ ಕಾಯ್ದೆಗಳು ಬಂದರೂ ಕೊಡಗಿನ ಭೂಮಾಲೀಕರ ಹಕ್ಕಿಗೆ ಚ್ಯುತಿ ಬರಲಿಲ್ಲ. ಆದ್ದರಿಂದ ಜಾತಿ, ಸಂಪ್ರದಾಯ, ನಂಬಿಕೆ ಹಾಗೂ ನಂತರದ ದಿನಗಳಲ್ಲಿಯೂ ಸಂಸ್ಕೃತಿ ಹೆಸರಲ್ಲಿ ಭೂಮಾಲೀಕ ವರ್ಗ ದುರ್ಬಲರನ್ನು ಶೋಷಿಸಲು ಸಾಧ್ಯವಾಯಿತು. ನಡಿಕೇರಿಯಂಡ

ಚಿಣ್ಣಪ್ಪನವರ ಪಟ್ಟೋಲೆ ಪಳಮೆಯಂಥ ಕೃತಿ ಕೊಡಗಿನ ದುರ್ಬಲ ವರ್ಗಗಳ ಶೋಷಣೆಗೆ ಈ ಸಂದರ್ಭದಲ್ಲೇ ಅಧಿಕೃತವಾಗಿ ಪರವಾನಿಗೆ ನೀಡಿತು. ವಿವಿಧ ಜಾತಿಗಳ ಜನರು ಕೊಡಗಿನ ಪ್ರಬಲ ವರ್ಗವಾದ ಕೊಡವ ಸಮುದಾಯದ ಜನರ ಮನೆಯ ಯಾವ ಯಾವ ಭಾಗದವರೆಗೆ ಮಾತ್ರ ಬರಬಹುದು ಎಂದು ೧೯೨೪ರಲ್ಲೇ ನಡಿಕೇರಿಯಂಡ ಚಿಣ್ಣಪ್ಪನವರು ಇತಿಹಾಸವನ್ನು ತಿರುಚಿ ಭೂ ಮಾಲೀಕರ ಶೋಷಣೆಗೆ ಲೈಸೆನ್ಸ್ ನೀಡಿದರು. ಯಾವುದಾದರೂ ಮಹಿಳೆ "ಕಳ್ಳ ಬೊಸುರಿಯಾಗಿ" ಕೊಡಗನಿಂದಲೇ ಗರ್ಭವಾಯಿತೆಂದು ದೂರಿದರೆ, ಒಂದೋ ಆ ಕೊಡಗ ತಾನೇ ಆ ಗರ್ಭಕ್ಕೆ ಕಾರಣ ಎಂದು ಒಪ್ಪಿಕೊಳ್ಳಬೇಕು ಇಲ್ಲವೆ "ಕೊಡಗನಿಂದಲೇ ಗರ್ಭವಾಯಿತೆಂದು ಪಂಚಾಯಿತರ ಮುಂದೆ ರುಜುವಾತು ಮಾಡಬೇಕು. ಇಲ್ಲದಿದ್ದರೆ ಅಂಥ ಹೆಂಗಸನ್ನು ಪೊರಂಬಡಿ (ಜಾತಿಭ್ರಷ್ಟ) ಮಾಡುವರು" ಎಂದು ಪಟ್ಟೋಲೆ ಪಳಮೆ ತಿಳಿಸುತ್ತದೆ. ಪಟ್ಟ ಭದ್ರ ಪಂಚಾಯತರ ಎದುರು ಒಬ್ಬ ಅಬಲೆ ತಾನು ಹೇಗೆ ಕೊಡಗನಿಂದ "ಕಳ್ಳಬೊಸುರಿ" ಯಾದೆ ಎಂದು ವಿವರಿಸುವಂಥ ಅವಮಾನಕಾರಿ ಬದುಕು ಇಲ್ಲಿನ ದುರ್ಬಲ ವರ್ಗಗಳ ಹೆಂಗಸರದಾಗಿತ್ತು. ಇದು ೧೯೫೬ರ ಹಿಂದಿದ್ದ ಸುಖೀ "ರಾಮರಾಜ್ಯ"ದ ಒಂದು ಸ್ಯಾಂಪಲ್ ಅಷ್ಟೆ.

**ಕೊಡಗಿಗೆ ದ್ರೋಹ-ಬ್ರಿಟಿಷರೊಂದಿಗೆ ಪಟ್ಟಭದ್ರರ ಸ್ನೇಹ-ಅಮರ ಸುಳ್ಯದವರಿಗೆ ವಿಶ್ವಾಸ ಘಾತಕ**

ಬ್ರಿಟಿಷರನ್ನು ವಿರೋಧಿಸುತ್ತಿದ್ದ ಯಾವುದೇ ರಾಜನನ್ನು "ಕಾಮುಕ-ಪ್ರಜಾಪೀಡಕ" ಇತ್ಯಾದಿಯಾಗಿ ಜರೆದು, ತಮ್ಮ ಹಿತಾಸಕ್ತಿಗಳಿಗಾಗಿ ಬ್ರಿಟಿಷರು ಅಂಥ ರಾಜರನ್ನು ಬಲಿಹಾಕುತ್ತಿದ್ದದ್ದು ಸಾಮಾನ್ಯವಾಗಿತ್ತು. ಇದಕ್ಕೆ ಕೊಡಗಿನ ಚಿಕ್ಕ ವೀರರಾಜೇಂದ್ರನೇನೂ ಹೊರತಾಗಿರಲಿಲ್ಲ. ೧೮೩೪ರಲ್ಲಿ ದಿವಾನರಾದ ಚೆಪ್ಪುಡಿ ಪೊನ್ನಪ್ಪ, ಅಪ್ಪಾರಂಡ ಬೋಪಣ್ಣ ಹಾಗು ಲಕ್ಷ್ಮೀನಾರಾಣಯ್ಯ ತಮ್ಮ ರಾಜನ ಬೆನ್ನಿಗಿರಿದು "ಹುತಾತ್ಮ"ರಾಗಿ ಬ್ರಿಟಿಷರು ಕೊಡಗಿಗೆ ವಕ್ಕರಿಸಲು ಕಾರಣರಾದರು. ಬ್ರಿಟಿಷರು ಯಾವುದೋ ಒತ್ತಡದಿಂದ ಗುಲಾಮಗಿರಿ ನಿಷೇಧ ಕಾನೂನನ್ನು ಜಾರಿಗೆ ತರುವಾಗಲು ಈ "ಹುತಾತ್ಮ" ದಿವಾನರು ಅಡ್ಡಗಾಲು ಹಾಕಿದರು. ಆದರೆ ಬ್ರಿಟಿಷರಿಂದಾಗಿ ಜೀವ ಉಳಿಸಿಕೊಂಡಿದ್ದ ಈ ದಿವಾನರ ವಿರೋಧ ಹೆಚ್ಚು ಕಾಲ ನಡೆಯಲಿಲ್ಲ. ಇದರಿಂದ ಈ ಪಟ್ಟಭದ್ರರಿಗೆ ಬರಗಾಲವೇನೂ ಬರಲಿಲ್ಲ. ಶೋಷಕರಾದ ಬ್ರಿಟಿಷ್ ಆಳರಸರಿಗೆ ತಮ್ಮ ನಾಡಿನ ಜನರನ್ನೇ ಬಲಿಕೊಡಲು ಈ ದಿವಾನರು ಹುನ್ನಾರ ನಡೆಸಿ ಸಫಲರಾದರು. ೧೮೩೭ರಲ್ಲಿ ಅಮರ ಸುಳ್ಯದಲ್ಲಿ ಕೊಡಗಿನ ಹಾಗೂ ಸುಳ್ಯದ ರೈತರು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟವನ್ನು ಸದೆ

ಬಡಿದು ಈ ದಿವಾನರು, ಅವರ ವಂಶಜರು, ನೆಂಟರಿಷ್ಟರು, ಬಂಧುಮಿತ್ರರು ಹಾಗು ಚೇಲಾಗಳೂ ಸಹಸ್ರಾರು ಏಕರೆ ಭೂಮಿಬಾಣೆಗಳನ್ನು ಜಮ್ಮ, ಉಂಬಳಿ, ಜಹಗೀರು ಪಡೆದರು. ಇದೇ ಹೊತ್ತಿನಲ್ಲಿ ಕೊಡಗಿನಲ್ಲಿ ಪ್ರಬಲವಾಗಿರುವ ಕೊಡವ ಸಮುದಾಯದ ವ್ಯಕ್ತಿಗಳಿಗೆ ಮಾತ್ರ ಅಸಿಸ್ಟೆಂಟ್ ಕಮೀಷನರ್ ಆಫ್ ಕೂರ್ಗ್ ಎನ್ನುವ ಹುದ್ದೆಯನ್ನು ಶಾಶ್ವತವಾಗಿ ಮೀಸಲಾಗಿಡಲು ಒಪ್ಪಂದವಾಯಿತು. ಈ ಒಪ್ಪಂದ ಭಾರತ ಸ್ವತಂತ್ರಗಳಿಸುವವರೆಗೂ ಮುಂದುವರೆಯಿತು. ಅಂದರೆ ಒಂದು ಅರ್ಥದಲ್ಲಿ ಕೆ.ಆರ್.ಎಂ.ಎಂ. ಹೇಳುವ "ರಾಮರಾಜ್ಯ"ದ ಅಂತಿಮ ದಿನಗಳವರೆಗೂ ಮುಂದುವರಿಯಿತು. ಇದರಿಂದಾಗಿ ಶ್ರೀಮಂತ ವರ್ಗ ಇನ್ನೂ ಶ್ರೀಮಂತವಾಯಿತು. ಬಡವರು ಮತ್ತೂ ಬಡವರಾದರು. ರಾಜರ ಕಾಲದಲ್ಲಿ ಸಮಾನ ಸ್ಥಾನಮಾನ ಹಾಗೂ ಭೂಮಿಯನ್ನು ಹೊಂದಿದ್ದ ಅಲ್ಪಸಂಖ್ಯಾಕ ಮೂಲನಿವಾಸಿಗಳು, ಅಧಿಕಾರ ರಹಿತರಾದ ಬಹು ಸಂಖ್ಯಾತ ಕೊಡವರು ವಸಾಹತು ಕಾಲದಲ್ಲಿ ಇನ್ನೂ ದುರ್ಬಲರಾದರು. ಚೀಫ್ ಕಮೀಷನರ್ ಹುದ್ದೆ ಯುರೋಪಿಯನ್ನರಿಗೆ ಮೀಸಲಾಗಿದ್ದರೆ ಉಳಿದಿದ್ದ ಒಂದೇ ಒಂದು ಅಸಿಸ್ಟೆಂಟ್ ಕಮೀಷನರ್ ಹುದ್ದೆ ಕೊಡವರಿಗೇ ಮೀಸಲಾಗಿದ್ದರೂ ಅರ್ಧಕ್ಕಿಂತ ಹೆಚ್ಚಿನ ಕೊಡವರು ಬಡವರಾಗಿಯೇ ಉಳಿದಿರುವ ವಾಸ್ತವಿಕ ಸತ್ಯ ಕೊಡವರಲ್ಲಿನ ದುಡ್ಡಿರುವ ಸಂಘಟಿತ ಒಕ್ಕಗಳ ಪ್ರಾಬಲ್ಯವನ್ನು ಸಾರಿ ಹೇಳುತ್ತದೆ. ಆ ಕಾಲದಲ್ಲಿ ಹಿಟ್ಟಿ ಬಿಟ್ಟಿ ಚಾಕ್ರಿಯನ್ನು ಕೊಡವರೂ ಸೇರಿದಂತೆ ಎಲ್ಲಾ ಜಮ್ಮ ರೈತರೂ ಕಡ್ಡಾಯವಾಗಿ ಮಾಡಬೇಕೆಂಬ ಅಧಿಕೃತ ಕಾನೂನಿದ್ದರೂ ಕೊಡವರಲ್ಲಿನ ಕೇವಲ ಐದು ಒಕ್ಕಗಳು ಮಾತ್ರ ಅಂಥ "ಕೀಳು" ಕೆಲಸ ಮಾಡುವುದರಿಂದ ವಿಮೋಚನೆ ಪಡೆಯಲು ಸಮರ್ಥವಾದವು. ಕತ್ತಿ ಕೋವಿ ಹಿಡಿದು ಸೆಕ್ಯುರಿಟಿ ಕೆಲಸ ಮಾಡುವ ಕೆಲಸ, "ಅರಮನೆ ಚಾಕ್ರಿ" ಮಾಡುವ ಕೆಲಸಗಳನ್ನು ಬ್ರಿಟಿಷರ ಪಾದಸೇವೆ ಮಾಡಿ ತಪ್ಪಿಸಿಕೊಂಡು ಇವರಲ್ಲಿನ ಕೆಲವರು "ರಾಯಲ್" ಗಳಾದದ್ದು ಕುತೂಹಲಕಾರಿಯಾದ ಅಂಶ. ಸಿ.ಸುಬ್ಬಯ್ಯನಂಥ ಅಸಿಸ್ಟೆಂಟ್ ಕಮಿಷನರ್ ಶೇ ೬೦ರಷ್ಟು ಕೊಡವರನ್ನು ಹಾಗೂ ಉಳಿದ ಜಮ್ಮರೈತರನ್ನು, ಸಾಗುರೈತರನ್ನು ಈ ಸಂದರ್ಭದಲ್ಲಿ ಬಲಿಪಶು ಮಾಡಿದ್ದು "ಸುಖ-ಶಾಂತಿ-ಸಮೃದ್ಧಿ" ನೆಲಸಿದ್ದ 'ರಾಮರಾಜ್ಯದಲ್ಲೇ' ಎಂದರೆ ಆಶ್ಚರ್ಯಪಡಬೇಕಾಗಿಲ್ಲ.

**ಬ್ರಿಟಿಷ್ ಬೆಂಬಲಿಗರ 'ಜನಾಂಗೀಯ' ರಾಜಕೀಯ ಮತ್ತು ಶಸ್ತ್ರಾಸ್ತ್ರ ಕಾಯಿದೆ.**

೧೮೬೧ ರಿಂದ ೧೯೫೪ರವರೆಗೆ ಅಧಿಕೃತವಾಗಿ ಜಮ್ಮ ರೈತರೆಲ್ಲರೂ (ಭೂ ಹಿಡುವಳಿದಾರ ಮೂಲನಿವಾಸಿಗಳು) ಆಗಿನ ಸರಕಾರಕ್ಕೆ ಕಡ್ಡಾಯವಾಗಿ ಮಾಡಬೇಕಾಗಿದ್ದ ಹಿಟ್ಟಿ ಬಿಟ್ಟಿ ಚಾಕ್ರಿಯ ಸಲುವಾಗಿ ಭಾರತೀಯ ಶಸ್ತ್ರಾಸ್ತ್ರ ಕಾಯಿದೆ ಪ್ರಕಾರ ಕೋವಿಯನ್ನು

ಇಟ್ಟುಕೊಳ್ಳಬಹುದಾಗಿತ್ತು. ಆ ಹೊತ್ತಿಗೆ ಕೋವಿ ಹಿಡಿದು ಬಿಟ್ಟಿ ಚಾಕ್ರಿಗೆ ಹೋಗುವುದು ''ಕೀಳು'' ಎಂಬ ಅರಿವು ಕಡಿಮೆಯಾಗುತ್ತಾ ಬಂದಿತ್ತು. ಹಿಟ್ಟಿಗಾಗಿ ಬಿಟ್ಟಿ ಚಾಕ್ರಿ ಮಾಡುವುದನ್ನು ಸಾಮಾನ್ಯವಾಗಿ ಹಿಟ್ಟಿ ಬಿಟ್ಟಿ ಚಾಕ್ರಿ ಎಂದು ಅರ್ಥೈಸಲಾಗುತ್ತದೆ. ರಾಜ ಅಥವಾ ಸರಕಾರಕ್ಕೆ ಈ ಸೇವೆ ಮಾಡಬೇಕಾಗಿದ್ದರಿಂದ ಈ ಚಾಕ್ರಿಯನ್ನು ''ಅರಮನೆ ಚಾಕ್ರಿ''ಯೆಂದೂ ಕರೆಯಲಾಗುತ್ತಿತ್ತು. ಬ್ರಿಟಿಷರ ಕಾಲದಲ್ಲೂ ಹಿಟ್ಟಿ ಬಿಟ್ಟಿ ಚಾಕ್ರಿ ಮುಂದುವರಿಯಿತು. ಯುರೋಪಿಯನ್ನರ ಪ್ರಭಾವದ ''ಗನ್''ಗೆ ಸಂಬಂಧಿಸಿದ ರಂಗೇರುತ್ತಿದ್ದ ಕಾಲ ಅದು. ಕೋವಿಯೊಂದಿಗೆ ''ಕೊಡಗಿನ ಸಂಸ್ಕೃತಿ'' ಅಂಟಿಕೊಳ್ಳುತ್ತಿದ್ದ ಸಂದರ್ಭ ಇದಾಗಿತ್ತು. ೧೯೨೪ರಲ್ಲಿ ಕೆಟೋಳಿ ಚಂಗಪ್ಪ (ಇವರು ೧೯೪೨ರಲ್ಲಿ ಕೊಡಗಿನ ಚೀಫ್ ಕಮಿಷನರ್ ಆದ ಏಕೈಕ ವ್ಯಕ್ತಿ), ಸಿ. ತಿಮ್ಮಯ್ಯನಂಥ ಅಧಿಕಾರಿಗಳಿಂದಾಗಿ ಭಾರತೀಯ ಶಸ್ತ್ರಾಸ್ತ್ರ ಕಾಯ್ದೆಗೆ ತಿದ್ದುಪಡಿಯೊಂದು ಬಂದಿತು. ಈ ತಿದ್ದುಪಡಿಯ ಪ್ರಕಾರ ''ತಮ್ಮ ಜನಾಂಗದಿಂದಾಗಿ (Race)ಕೊಡವರಾದವರು ಹಾಗೂ ಜಮ್ಮ ರೈತರು'' ಭಾರತೀಯ ಶಸ್ತ್ರಾಸ್ತ್ರ ಕಾಯಿದೆಯಿಂದ ವಿನಾಯಿತಿ ಪಡೆಯಬಹುದಾಗಿತ್ತು. ಇದರ ಪರಿಣಾಮವಾಗಿ ಕೊಡವರು ಈಗ ಜಮ್ಮ ರೈತರೆಂಬ ಕಾರಣಕ್ಕಾಗಿ ಮಾತ್ರವಲ್ಲದೆ, ಕೊಡವ ''ಜನಾಂಗ''ಕ್ಕೆ ಸೇರಿದವರೆಂದೂ ಕೋವಿಯನ್ನು ಇಟ್ಟುಕೊಳ್ಳುವ ''ಜನ್ಮಸಿದ್ಧ'' ಹಕ್ಕನ್ನು ಪಡೆಯಲಾರಂಭಿಸಿದರು. ಬ್ರಿಟಿಷರನ್ನು ಒದ್ದೋಡಿಸಲು ಜೀವನವನ್ನು ಮುಡುಪಾಗಿಟ್ಟ ಭಾರತೀಯ ಕ್ರಾಂತಿಕಾರಿಗಳನ್ನು ಬಗ್ಗು ಬಡಿಯಲು ಆ ಕಾಲದಲ್ಲಿ ಭಾರತೀಯರು ವೈಯಕ್ತಿಕವಾಗಿ ಕೋವಿ ಹೊಂದುವುದನ್ನು ಬ್ರಿಟಿಷ್ ಸರಕಾರವು ನಿಷೇಧಿಸಿತ್ತು. ಕೊಡಗಿನ ಮಣ್ಣಿನ ಈ ದುಷ್ಟ ಕೂಟ ತನಗೆ ಈ ಹಿಂದೆ ಎಂದೂ ಇರದಿದ್ದ ಈ ವಿಶೇಷ ಸವಲತ್ತನ್ನು ಪಡೆದು ಒಣಪ್ರತಿಷ್ಠೆಯನ್ನು ಮೆರೆಯಲು ಕೊಡವ ಹಾಗೂ ಕೊಡವೇತರ ಮೂಲನಿವಾಸಿಗಳನ್ನು ಒಡೆದು ಅಟ್ಟಹಾಸ ಮಾಡಿತು.೧೯೪೭ರ ಹಿಂದಿದ್ದ ರಾಮರಾಜ್ಯದಲ್ಲಿ ತಯಾರಾದ ಈ ಕಾನೂನು ಇಂದಿನ ಪ್ರಜಾತಾಂತ್ರಿಕ ಜಾತ್ಯತೀತ ರಾಷ್ಟ್ರದಲ್ಲಿಯೂ ''ಜನಾಂಗ''ದ ಹೆಸರಿನಲ್ಲಿ ಜಾರಿಯಲ್ಲಿರುವುದು ನಮ್ಮ ಸಂಸ್ಕೃತಿಯ ದೊಣ್ಣೆ ನಾಯಕರಿಗೆ ಮತ್ತು ಉಸ್ತುವಾರದಾರರಿಗೆ ಹೇಸಿಗೆಯೆಂದು ಕೂಡ ಅನ್ನಿಸುತ್ತಿಲ್ಲ. ೧೯೯೮ರ ಜನವರಿ ೧೦-೧೧ ರಂದು ಬೆಂಗಳೂರಿನಲ್ಲಿ ಕೊಡವ ಸಾಹಿತ್ಯ ಅಕಾಡೆಮಿ ಹಾಗೂ ಕೊಡವ ಸಮಾಜ ನಿಯೋಜಿಸಿದ ''ರಾಷ್ಟ್ರೀಯ ಕೊಡವ ಮೇಳ''ದಲ್ಲಿ ''ಶಾಶ್ವತ'' ಶಸ್ತ್ರಾಸ್ತ್ರ ಪರವಾನಿಗೆ ವಿನಾಯಿತಿಗಾಗಿ ಸಂಸ್ಕೃತಿಯ ಉಸ್ತುವಾರದಾರರು ಲಾಬಿ ಮಾಡಿರುವುದು ಈ ಸಂದರ್ಭದಲ್ಲಿ ಆಶ್ಚರ್ಯವೆನ್ನಿಸುವುದಿಲ್ಲ. ಪ್ರಬಲ ವರ್ಗಗಳ ಹಿತಾಸಕ್ತಿಗಾಗಿಯೇ ಇರುವ ಇಂತಹ ಅನಿಷ್ಟಗಳು ಮತ್ತು ಅವಕ್ಕೆ ಸಂಬಂಧಿಸಿದ ಸಿದ್ಧಾಂತಗಳು ''ರಾಮರಾಜ್ಯ''ದ ಮರುಸ್ಥಾಪನೆಯ ಹಿಂದಿರುವುದು ಸ್ಪಷ್ಟವಾಗಿ

ಗೋಚರಿಸುತ್ತದೆ.

**ಕೊಡಗು ಲೆಜಿಸ್ಲೇಟಿವ್ ಕೌನ್ಸಿಲ್‌ನಲ್ಲಿ ಕೊಡವೇತರರಿಗೆ ಪಂಗನಾಮ**

ಕೊಡಗಿನ ''ಸ್ವತಂತ್ರ ರಾಜ್ಯ''ದ ಕುರಿತು ಮಾತನಾಡುವಾಗಲೆಲ್ಲಾ ೧೯೨೪ರಿಂದ ೧೯೪೬ರವರೆಗೆ ಇದ್ದ ಕೂರ್ಗ್ ಲೆಜಿಸ್ಲೇಟಿವ್ ಕೌನ್ಸಿಲ್ ಹಾಗೂ ೧೯೪೬ರಿಂದ ೧೯೫೨ರವರೆಗಿದ್ದ ಕೂರ್ಗ್ ಲೆಜಿಸ್ಲೇಟಿವ್ ಅಸೆಂಬ್ಲಿಯ ಬಗ್ಗೆ ಕೆ.ಆರ್.ಎಂ.ಎಂ. ವರ್ಣರಂಜಿತ ಲೋಕವನ್ನು ಮುಂದಿಡುತ್ತದೆ. ಆ ಕಾಲದಲ್ಲಿಯೇ ೧೫ ಜನ ಚುನಾಯಿತರಾಗಿಯೂ ೫ ಜನ ನಾಮಕರಣಗೊಂಡ ಸದಸ್ಯರಾಗಿಯೂ ಕೊಡಗು ರಾಜ್ಯಕ್ಕೆ ಭದ್ರ ತಳಪಾಯ ಹಾಕಿದ್ದರು ಎನ್ನುವಂತೆ ನಾಚಪ್ಪನವರು ವಾದ ಮಾಡುತ್ತಾರೆ. ಆದರೆ ಬ್ರಿಟಿಷರ ಕಾಲಕೆಳಗಿದ್ದ ಈ ಕೂರ್ಗ್ ಲೆಜಿಸ್ಲೇಟಿವ್ ಕೌನ್ಸಿಲ್ ಎನ್ನುವುದು ಪ್ರಬಲ ವರ್ಗದ ದಾದಾಗಿರಿಗೆ ಮುಕ್ತ ಪರವಾನಗೆ ನೀಡುವಂಥ ವ್ಯವಸ್ಥೆಯಾಗಿತ್ತು. ಕೌನ್ಸಿಲ್‌ನ ೧೫ ಜನರಲ್ಲಿ ಇಬ್ಬರನ್ನು ಯುರೋಪಿಯನ್ ವಲಯದಿಂದ, ೯ ಜನರನ್ನು ಜಮ್ಮ ರೈತರಿಂದ ಹಾಗೂ ಉಳಿದ ೪ ಜನರನ್ನು ಜಮ್ಮ ರಹಿತ ರೈತ ವರ್ಗದಿಂದ ಚುನಾಯಿಸಲಾಗುತ್ತಿತ್ತು. ಆದರೆ ಭೂ ಹಿಡುವಳಿ ಇರುವ ಹೆಣ್ಣಿಗೆ ೧೯೩೬ರವರೆಗೂ ಈ ಚುನಾವಣೆಯಲ್ಲಿ ಮತದಾನದ ಹಕ್ಕು ಇರಲಿಲ್ಲ. ಅಂದರೆ ಹೆಣ್ಣು ಎಷ್ಟೇ ದೊಡ್ಡ ಕುಟುಂಬಕ್ಕೆ ಸೇರಿದ್ದರೂ ಅವಳು ''ಹೆಣ್ಣೆಂಬ'' ಕಾರಣಕ್ಕಾಗಿ ಬ್ರಿಟಿಷ್ ಬಾಲಬಡುಕರು ಅನುಷ್ಠಾನಕ್ಕೆ ತಂದ ವ್ಯವಸ್ಥೆಯಲ್ಲಿ ಕೀಳೇ ಆಗಿದ್ದಳು ಎನ್ನುವುದನ್ನು ಇದು ತೋರಿಸುತ್ತದೆ. ಭೂ ''ಒಡತಿ''ಯ ಕತೆಯೇ ಹೀಗಿದ್ದ ಮೇಲೆ ಭೂ ರಹಿತ ವರ್ಗದ ಹೆಣ್ಣಿನ ಗೋಳನ್ನು ಊಹಿಸಬಹುದು. ಜಮ್ಮ ರಹಿತ (ಸಾಗು) ರೈತ ವರ್ಗವು ಕೊಡಗಿನ ಪ್ರಗತಿಗಾಗಿ ಶೇ ೬೫ಕ್ಕಿಂತ ಹೆಚ್ಚು ತೆರಿಗೆ ಪಾವತಿಮಾಡುತ್ತಿತ್ತು. ಒಟ್ಟು ಜನಸಂಖ್ಯೆಯಲ್ಲಿ ಅವರ ಸಂಖ್ಯೆ ಪ್ರಧಾನವಾಗಿತ್ತು. ಆದರೆ ಅವರಿಗೆ ಕೇವಲ ೪ ಸೀಟುಗಳನ್ನು ಮಾತ್ರ ಮೀಸಲಿಡುವಲ್ಲಿ ಕೊಡಗಿನ ಅಧಿಕಾರದ ದಲ್ಲಾಳಿಗಳು ಸಫಲರಾದರು. ಅಮ್ಮ ಕೊಡವ, ಕೊಡವ, ಗೌಡ, ಹೆಗ್ಗಡೆ, ಐರಿ, ಕೋಯವ, ಜಮ್ಮ ಮಾಪಿಳ್ಳೆ, ಐಂಬೊಕ್ಕಳು (೧೮೧೧ರ ಲಿಂಗರಾಜನ ಹುಕುಂನಾಮೆಗಳು ಮತ್ತು ೧೮೩೪ರಲ್ಲಿ ಕೊಡಗಿನ ಪೊಲೀಸ್ ಸೂಪರಿಂಟೆಂಡೆಂಟ್ ಲೀ ಹಾರ್ಡಿ ತಯಾರಿಸಿದ ಶಾಸನ ಪತ್ರದ ಪ್ರಕಾರ) ಸಮುದಾಯದಲ್ಲಿ ಹುಟ್ಟಿದ ಎಲ್ಲರಿಗೂ ಕೊಡಗಿನ ಜಮ್ಮ ಭೂಮಿಯ ಮೇಲೆ ಹಕ್ಕು ಇತ್ತು ಮತ್ತು ಈಗಲೂ ಇದೆ. ಕೊಡಗಿನಲ್ಲಿರುವ ಉಳಿದ ೪೪ ಸಮುದಾಯಗಳ ಕೆಲವು ಜನರು ಕೂಡ ''ಜಮ್ಮ'' ಭೂಮಿಯನ್ನು ಹೊಂದಿದ್ದರು ಎಂದು ೧೯೦೦ರ ಅಧಿಕೃತ ದಾಖಲೆಗಳು ತಿಳಿಸುತ್ತವೆ. ಆದರೆ ಆಶ್ಚರ್ಯದ ಮಾತೆಂದರೆ ೧೯೨೪ರಿಂದ ೧೯೨೬ರವರೆಗೆ ಮೇಲೆ ಹೇಳಿದ ಜಮ್ಮ ರೈತರನ್ನು ಕೊಡವ ಸಮುದಾಯದವರು ಮಾತ್ರ ಪ್ರತಿನಿಧಿಸುತ್ತಿದ್ದರು. ೧೯೨೬ರಲ್ಲಿ ೮ ಮಂದಿ ಕೊಡವರು ಕೌನ್ಸಿಲ್‌ನ ಸದಸ್ಯರಾದರೆ

೯ನೇ ಸದಸ್ಯರಾಗಿ ಚೌಡ್ಲು ಕಾಳಪ್ಪ ಎನ್ನುವ ಗೌಡ ಸಮುದಾಯದ ವ್ಯಕ್ತಿ ಜಮ್ಮ ರೈತರನ್ನು ಪ್ರತಿನಿಧಿಸುತ್ತಿದ್ದರು. ೧೯೩೦ರ ಹೊತ್ತಿಗೆ ಕೊಡವೇತರರ ಸಂಖ್ಯೆ ಕೇವಲ ೨ ಕ್ಕೇರಿತು ಎಂದರೆ ನಾಚಪ್ಪ ಹೇಳುವ ''ರಾಮರಾಜ್ಯ''ದ ಕಥೆ ನಮಗೆ ಇನ್ನೂ ಸ್ಪಷ್ಟವಾಗುತ್ತದೆ. ಮುತ್ತಮ್ಮ ಎನ್ನುವ ನಿವೃತ್ತ ಐ.ಎಫ್.ಎಸ್. ಅಧಿಕಾರಿ ''ಮುಂದೆ ಕೊಡಗು ಪ್ರತ್ಯೇಕ ರಾಜ್ಯವಾದರೆ ಎಲ್ಲಾ ಅಧಿಕಾರಗಳೂ ಕೊಡವರಿಗೆ ಮೀಸಲಾಗಿರಬೇಕು'' ಎಂದು ೧೯೯೦ರಲ್ಲಿ ಹೇಳಿದರೆ ಅವು ಕೇವಲ ದುರಂಹಕಾರದ ಮಾತುಗಳಾಗುವುದಿಲ್ಲ. ಬದಲಾಗಿ ಅವುಗಳು ಖೊಮೈನಿವಾದಿ ಜಾತೀವಾದಿಗಳು ಮೇಲುಗೈ ಸಾಧಿಸುತ್ತಿರುವ ಈ ವ್ಯವಸ್ಥೆಯ ಮುಂದಿನ ಕರಾಳ ದಿನಗಳ ಸತ್ಯ ಕೂಡ ಆಗಬಹುದು.

## ಸ್ವಾತಂತ್ರ್ಯ ಹೋರಾಟ ಮತ್ತು ಕೊಡಗು ರಾಜ್ಯದ ವಿಲೀನ

### ವಿಲೀನ ತಂದ ಬಿಡುಗಡೆ

ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ದೇಶದಾದ್ಯಂತ ಹೋರಾಟ ನಡೆಯುತ್ತಿದ್ದಾಗ ಕೊಡಗಿನಲ್ಲಿ ಬ್ರಿಟಿಷರ ಭಾರತೀಯ ಗುಲಾಮರು ಅದನ್ನು ಸದೆಬಡಿಯುತ್ತಿದ್ದರು. ಕೊಡಗಿನ ಬ್ರಿಟಿಷ್ ಬಾಲಬಡುಕ ''ರಾವ್ ಬಹದ್ದೂರ್''ಗಳು ಮತ್ತು ಅಧಿಕಾರಿಗಳು ಬ್ರಿಟಿಷ್ ಸಾಮ್ರಾಜ್ಯಷಾಹಿಗಳ ವಿರುದ್ಧ ದನಿ ಎತ್ತಿದ ಕೊಡಗಿನ ಜನರನ್ನು ''ದೇಶದ್ರೋಹಿ'' ಗಳೆಂದು ಪರಿಗಣಿಸಿ ಸೆರೆಮನೆಗೆ ಕಳುಹಿಸಲು ಮೀಸಲಾಗಿದ್ದರು. ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಾರ್ಟಿಯನ್ನು ಹುಟ್ಟುಹಾಕಿದ ಚಕ್ಕೆರ ಬಿ.ಮೊಣ್ಣಯ್ಯ, ಕಾಂಗ್ರೆಸ್ಸಿನ ಪಂದ್ಯಂಡ ಬೆಳ್ಳಿಯಪ್ಪ, ಚೆಪ್ಪುಡಿರ ಎಂ. ಪೂಣಚ್ಚ ಮುಂತಾದ ಕೊಡವರು ಆ ಕಾಲದಲ್ಲಿ ಸರ್ವಸ್ವತ್ಯಾಗ ಮಾಡಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿ ಕೊಡಗಿನ ಜನರಿಗೆ ಗೌರವ ತಂದು ಕೊಟ್ಟ ಉದಾಹರಣೆಗಳನ್ನು ನಾವು ನೋಡಬಹುದು. ಇವರೆಲ್ಲಾ ಆ ಕಾಲದಲ್ಲಿದ್ದ ''ರಾಮರಾಜ್ಯ''ದ ವಿರುದ್ಧ ಹೋರಾಟ ಮಾಡಿದವರು ಎಂಬುದನ್ನು ಗಮನಿಸಬೇಕು. ಆದರೆ ಕೊಡಗು ಕರ್ನಾಟಕದೊಂದಿಗೆ ವಿಲೀನವಾಗಲು ಕಾರಣಕರ್ತರೆಂದು ಸಿ.ಎಂ.ಪೂಣಚ್ಚನವರಂತಹ ಸ್ವಾತಂತ್ರ್ಯ ಸೇನಾನಿಗಳನ್ನು ಕೆ.ಆರ್ .ಎಂ.ಎಂ. ''ಕರ್ನಾಟಕದ ಏಜೆಂಟ್ ''ಗಳೆಂದೂ ''ಕರ್ನಾಟಕ ಸಾಮ್ರಾಜ್ಯ ಷಾಹಿಯ ದಾಸರೆಂದೂ'' ಜರೆದು ಭಾರತದ ''ಬೆಳ್ಳಿ ಹಬ್ಬ''ದ ಕಾಣಿಕೆ ನೀಡಿತು. ಕೆ.ಆರ್.ಎಂ.ಎಂ.ನ ಹಿಂದಿನ ಅವತಾರವಾದ ಲಿಬರೇಷನ್ ವಾರಿಯರ್ಸ್ ಆಫ್ ಕೂರ್ಗ್ ಹೊರಡಿಸಿದ ಕರಪತ್ರಗಳಲ್ಲಿ ಈ ವಿಚಾರ ಸಾಕಷ್ಟು ಸ್ಪಷ್ಟವಾಗಿಯೇ ಬಂದಿದೆ. ಚೆಪ್ಪುಡಿರ ಪೂಣಚ್ಚನವರಂತ ಹಿರಿಯ ರಾಜಕೀಯ ಮುತ್ಸದ್ಧಿಯ ಬಗ್ಗೆ ಅಶ್ಲೀಲವಾಗಿ ಜರೆಯುವುದನ್ನು ನೋಡಿದರೆ ಇವರೆಲ್ಲರ ಸಿದ್ಧಾಂತದ ಅಂತಃಕರಣ ನಮಗೆ ಸ್ಪಷ್ಟವಾಗುವುದು. ''ಕೊಡಗನ್ನು ಕರ್ನಾಟಕದೊಂದಿಗೆ ವಿಲೀನ ಮಾಡಿದ ಅಪರಾಧಕ್ಕಾಗಿ'' ಹಾಗೂ ಕೊಡಗಿನ ಹಿಂದುಳಿದ ವರ್ಗಗಳು, ದಲಿತರು, ಅಲ್ಪಸಂಖ್ಯಾತರು ಹಾಗೂ ಬಡಕೊಡವರು ಕರ್ನಾಟಕದಲ್ಲಿ ಸಮಾನ

ಅವಕಾಶಕ್ಕಾಗಿ ತಲೆಯೆತ್ತಿ ನಿಲ್ಲುವ ವಾತಾವರಣವನ್ನು ಸೃಷ್ಟಿಸಿದ ಕಾರಣಕ್ಕಾಗಿ ಪೂಣಚ್ಚನವರು ಕೆ.ಆರ್.ಎಂ.ಎಂ.ನ ಬಾಯಿಗೆ ಆಹಾರವಾಗಿದ್ದಾರೆ. ನಾಚಪ್ಪನವರು ತಿಳಿಸಿರುವಂತೆ ವಿಲೀನವಾದುದರಿಂದ ಕೊಡಗು ಅಧಃಪತನದತ್ತ ಸಾಗುತ್ತಿದೆ. ಅದು ಸ್ವರ್ಣಯುಗದಿಂದ ಅಂಧಯುಗಕ್ಕೆ ಕಾಲಿಟ್ಟಿದೆ. ಆದರೆ ಆ ಕಾಲದಲ್ಲಿ ಕೊಡಗು ಶಾಸನ ಸಭೆಯಲ್ಲಿದ್ದ ೨೪ ಸದಸ್ಯರ ಪೈಕಿ ೨೨ ಸದಸ್ಯರು ಕರ್ನಾಟಕದೊಂದಿಗೆ ಕೊಡಗು ವಿಲೀನವಾಗಲಿ ಎಂದು ಸಹಿಹಾಕಿ ವಿಶಾಲ ಕರ್ನಾಟಕ ರಾಜ್ಯ ಸ್ಥಾಪನೆಯಾಗಲು ಕಾರಣವಾದುದನ್ನು ಕೆ.ಆರ್.ಎಂ.ಎಂ. ಏಕೆ ಮುಚ್ಚಿಡುತ್ತದೆ? ಡಿ.ಬಿ. ರಾಮಚಂದ್ರಾಚಾರ್ ಅವರ "ಅವಕಾಶದ ಅಲೆಗಳ ಮೇಲೆ" ಎನ್ನುವ ಪುಸ್ತಕದಲ್ಲಿ ಹೇಳುವಂತೆ "....ಕೊಡಗು ಪ್ರತ್ಯೇಕವಾಗಿ ಇರಬೇಕು ಎಂದು ಪ್ರತ್ಯೇಕವಾದಿ ತತ್ವವನ್ನು ಎತ್ತಿ ಹಿಡಿದು ಸಾರ್ವಜನಿಕ ಚುನಾವಣೆಯನ್ನು ಎದುರಿಸಿ ಜಯಶೀಲರಾಗಿದ್ದ ಏಳೂ ಜನ ಸದಸ್ಯರು ಅದರಲ್ಲೂ ಮುಖ್ಯವಾಗಿ ಈ ಗುಂಪಿನ ನಾಯಕರಾಗಿದ್ದ ಪಂದ್ಯಂಡ ಬೆಳ್ಳಿಯಪ್ಪ ಆದಿಯಾಗಿ ಐದು ಜನ ಸದಸ್ಯರು ಕೊಡಗು ಮೈಸೂರಿನೊಂದಿಗೆ ವಿಲೀನಗೊಳ್ಳಲು ಕಾಂಗ್ರೆಸ್ ಸದಸ್ಯರೊಂದಿಗೆ ಬೆಂಬಲ ಸೂಚಿಸಿದರು. ಕೆ.ಪಿ. ಕರುಂಬಯ್ಯ ಮತ್ತು ಪಿ.ಸಿ. ಉತ್ತಪ್ಪ ಇಬ್ಬರು ಮಾತ್ರ ವಿಲೀನದ ವಿರುದ್ಧ ಮತ ನೀಡಿದರು. ಸಂವಿಧಾನದ ಆರ್ಟಿಕಲ್ ಮೂರರ ಅನ್ವಯ (Formation of New States) ಕೇಂದ್ರ ಸರ್ಕಾರ ಕೊಡಗು ಮೈಸೂರಿನೊಡನೆ ವಿಲೀನವಾಗಲು ಒಪ್ಪಿಗೆ ನೀಡಿತು ......" ಜನರಿಂದ ಶಾಸನ ಸಭೆಗೆ ಹೋದ ಬೆಳ್ಳಿಯಪ್ಪನವರ ಪ್ರತ್ಯೇಕ ಪಕ್ಷ ಹಾಗೂ ಕಾಂಗ್ರೆಸ್ ಪಕ್ಷಗಳೆರಡೂ ಕೂಡ ವಿಲೀನವನ್ನು ಪ್ರೋತ್ಸಾಹಿಸಿದವು ಎಂದು ಇದರಿಂದ ತಿಳಿದು ಬರುತ್ತದೆ. ಕೊಡಗಿನ ಫ್ಯೂಡಲ್ ಶಕ್ತಿಗಳನ್ನು ಬಿಟ್ಟರೆ ಯಾರೂ ಇದರ ಬಗ್ಗೆ ಕೊರಗದಿರುವುದನ್ನು ನಾವು ಇಲ್ಲಿ ಗಮನಿಸಬೇಕು.

೧೯೫೬ರಲ್ಲಿ ಮೈಸೂರಿನೊಂದಿಗಾದ ಕೊಡಗಿನ ವಿಲೀನದಿಂದ ಕೊಡಗಿನ ಜನರಿಗೆ ನಿಜಕ್ಕೂ ಒಂದು ಒಳ್ಳೆಯ ಅವಕಾಶವಾಯಿತು. ತಾಂತ್ರಿಕ ಹಾಗೂ ಉನ್ನತ ವಿದ್ಯಾಭ್ಯಾಸಕ್ಕಾಗಲಿ ಹೆಚ್ಚುತ್ತಿದ್ದ ಪ್ರಜಾಸಂಖ್ಯೆಗೆ ಉದ್ಯೋಗವಕಾಶವನ್ನು ಒದಗಿಸಲಿಕ್ಕಾಗಲೀ ಸಾಧ್ಯವಾಗದ ಪರಿಸ್ಥಿತಿಯಿಂದ ಪಾರಾದ ಒಂದು ಸಂದರ್ಭ ಅದು. ಬೆಂಗಳೂರು ಮೈಸೂರು ಹಾಗೂ ಮದ್ರಾಸ್ ಮೆಡಿಕಲ್ ಕಾಲೇಜುಗಳಲ್ಲಿ ಹಾಗೂ ಎಂಜಿನಿಯರಿಂಗ್ ಕಾಲೇಜುಗಳಲ್ಲಿ ತಲಾ ಒಂದು ಸೀಟು ಕೊಡಗಿನವರಿಗೆ ಸಿಗುತ್ತಿತ್ತು. ದೆಹಲಿಯ ಲೇಡಿ ಹಾರ್ಡಿಂಜ್ ಕಾಲೇಜಿನಲ್ಲಿ, ವೆಟರ್‌ನರಿ ಅಗ್ರಿಕಲ್ಚರ್ ಕಾಲೇಜುಗಳಲ್ಲಿ ಒಂದೊಂದು ಸ್ಥಾನ ಮೀಸಲಾಗಿತ್ತು. ಕೇವಲ ಹತ್ತುಜನ ಅತ್ಯಂತ ಬುದ್ಧಿವಂತರು ತಾಂತ್ರಿಕ ಹಾಗೂ ಉನ್ನತ ಶಿಕ್ಷಣದ ಅವಕಾಶವನ್ನು ಪಡೆಯುತ್ತಿದ್ದರು. ಉದ್ಯೋಗ ಪಡೆಯುವುದು ಅತ್ಯಂತ ಸಾಹಸದ ಕೆಲಸವಾಗಿತ್ತು. ಆದರೆ ಕರ್ನಾಟಕದೊಂದಿಗೆ ವಿಲೀನವಾದ ನಂತರ ಕೊಡವ ಸಮುದಾಯದ ಹಿನ್ನೆಲೆಯಿಂದ ಬಂದ ೧೫-೨೦ ಐ.ಎ.ಎಸ್. ಅಧಿಕಾರಿಗಳು,

೨೦-೨೫ ಕೆ.ಎ.ಎಸ್ ಶ್ರೇಣಿಯ ಅಧಿಕಾರಿಗಳು ಕರ್ನಾಟಕದ ಇತರೆಡೆಯಲ್ಲೂ ಸೇವೆ ಮಾಡುವಂತಾಯಿತು. ಪೋಲೀಸ್, ಅರಣ್ಯ ಮುಂತಾದ ಸರಕಾರಿ ಇಲಾಖೆಗಳಲ್ಲಿ ಅಧಿಕಾರಿಗಳಾಗಿರುವವರನ್ನು, ನೂರಾರು ಸಂಖ್ಯೆಯಲ್ಲಿರುವ ವೈದ್ಯರು, ಎಂಜಿನಿಯರ್‌ಗಳೇ ಮುಂತಾಗಿ ಉನ್ನತ ವಿದ್ಯಾಭ್ಯಾಸ ಪಡೆದ ಅನೇಕ ಕೊಡಗಿನವರನ್ನು ೧೯೫೬ರ ನಂತರ ನಾವು ಕಾಣಬಹುದು. ಇದರಲ್ಲೂ ಶೇ ೮೦ರಷ್ಟು ಜನರು ಕೊಡವ ಸಮುದಾಯದಿಂದಲೇ ಬಂದವರಾಗಿದ್ದು ರಾಜ್ಯದ ಬೇರೆ ಬೇರೆ ಕಡೆ ಸೇವೆ ಸಲ್ಲಿಸುತ್ತಿದ್ದಾರೆ. ಉಳಿದ ಮೂಲನಿವಾಸಿಗಳಲ್ಲಿ ಐ.ಎ.ಎಸ್. ಶ್ರೇಣಿಯ ಅಧಿಕಾರಿಗಳಿಲ್ಲದಿದ್ದರೂ ಈ ಸಂದರ್ಭದಲ್ಲಿ ಒಂದೆರಡು ಕೆ.ಎ.ಎಸ್. ಶ್ರೇಣಿಯ ಹುದ್ದೆಗಳು ಅವರಿಗೂ ದೊರೆತವು. ಹಾಗೆಯೇ ಇವರಿಗೆಲ್ಲಾ ಸಾವಿರಾರು ಸಂಖ್ಯೆಯಲ್ಲಿ ಕರ್ನಾಟಕ ಸರಕಾರದ ಅಥವಾ ಖಾಸಗಿ ಸಂಸ್ಥೆಗಳಲ್ಲಿ ಕಾರಕೂನ, ಟೈಪಿಸ್ಟ್, ಪೊಲೀಸ್ ಕಾನ್ ಸ್ಟೇಬಲ್, ಶಾಲಾ ಮಾಸ್ತರರಂತಹ ಹುದ್ದೆಗಳು ಕರ್ನಾಟಕದಲ್ಲೆಲ್ಲಾ ದೊರೆತವು. ''ಮೂಲನಿವಾಸಿ'' ಎಂದು ಈಗ ಗುರುತಿಸಲ್ಪಡುವ ಎಷ್ಟೋ ಸಮುದಾಯಗಳಿಗೆ ೧೯೫೬ರ ನಂತರ ಕಾರಕೂನರಂಥ ಉದ್ಯೋಗಗಳೂ ಪ್ರಥಮ ಬಾರಿಗೆ ದೊರಕಿದವು. ಕೊಡಗಿನ ದಲಿತ ಸಮುದಾಯಗಳಿಗೆ ಈ ಹುದ್ದೆಗಳಲ್ಲೆಲ್ಲಾ ಪಾಲು ಸಿಗದಿದ್ದರೂ ಸಾಂಪ್ರದಾಯಿಕ ಗುಲಾಮಗಿರಿಯಿಂದ ಜವಾನನಾಗುವ ಒಂದು ಅವಕಾಶವಾದರೂ ದೊರೆಯಿತು. ಹೀಗಾಗಿ ಕೊಡಗಿನಿಂದ ಹೊರ ಹೋಗಿ ಹೊಸ ಸಾಮಾಜಿಕ ಸ್ಥಾನ ಮಾನಗಳನ್ನು ಪಡೆಯಲು ಸಾಧ್ಯವಾಯಿತು. ಇವರೆಲ್ಲರಿಗೆ ಕರ್ನಾಟಕದ ಇತರ ಜನರೊಂದಿಗೆ ಗುರುತಿಸಿಕೊಂಡು ತಾವಿದ್ದ ಬಾವಿಯ ಪರಿಧಿಯನ್ನು ಒಡೆದು ಸಮುದ್ರದಲ್ಲಿ ವಿಹರಿಸಲು ಸಾಧ್ಯವಾಯಿತು. ಆದರೆ ಮತ್ತೆ ಅದೇ ಬಾವಿಗೆ ಬಿದ್ದು ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಹಾಕಿಕೊಂಡರೆ ನರಕ ಗ್ಯಾರಂಟಿಯಾಗುವುದರಲ್ಲಿ ಸಂಶಯವಿಲ್ಲ. ಕೊಡಗಿನ ಹೊರಗೆ ಕಾರಕೂನನಾಗಿ ಅಥವಾ ಜವಾನನಾಗಿ ಹೋದ ಕೊಡಗಿನ ದುರ್ಬಲ ವರ್ಗದ ಅನೇಕರ ಮಕ್ಕಳು ಉನ್ನತ ವ್ಯಾಸಂಗ ಪಡೆದು ಸ್ವಾಭಿಮಾನದಿಂದ ಬದುಕಲು ಸಾಧ್ಯವಾದದ್ದು ೧೯೫೬ರ ನಂತರ ಎಂಬುದನ್ನು ನಾವು ಅರಿತುಕೊಳ್ಳಬೇಕು. ೧೯೫೬ರ ಹಿಂದಿನ ''ಸುಖೀ ರಾಮರಾಜ್ಯ''ದಲ್ಲಿ ದುರ್ಬಲರಾಗಿದ್ದವರು ಈಗಲೂ ದುರ್ಬಲವಾಗಿರಬೇಕೆಂದು ಅಪೇಕ್ಷಿಸುವುದು ಪ್ರಜಾತಂತ್ರ ವಿರೋಧಿ ನಿಲುವಾಗುತ್ತದೆ. ಮಾತ್ರವಲ್ಲ ಅದು ಪ್ರಜಾವಿರೋಧಿ ಸಿದ್ಧಾಂತವಾಗುತ್ತದೆ. ಹಾಗಾಗಿ ಅದು ಸಂವಿಧಾನ ವಿರೋಧಿಯಾಗುತ್ತದೆ. ಆ ಮೂಲಕ ಅದು ದೇಶ ದ್ರೋಹ ಕೂಡ ಆಗುತ್ತದೆ.

## ಪ್ರತ್ಯೇಕ ಕೊಡಗು ರಾಜ್ಯ ಮತ್ತು ವಲಸೆಗಾರರು

### ಸ್ವದೇಶಿ ಭಾರತೀಯರನ್ನು 'ವಲಸೆಗಾರರು' ಎನ್ನುವುದು ಸಂವಿಧಾನ ವಿರೋಧಿ

''ಕೊಡಗಿನ ಮೇಲೆ ಬಾಂಬ್ ಬಿದ್ದಿದೆ !'' ಎನ್ನುವ ರೀತಿಯಲ್ಲಿ ಕೊಡಗಿನಲ್ಲಿ ''ವಲಸೆಗಾರರಿದ್ದಾರೆ'' ಎಂದು ಕೆ.ಆರ್.ಎಂ.ಎಂ. ಒಂದು ರೀತಿಯಲ್ಲಿ ಭೀತಿಯ

ವಾತಾವರಣವನ್ನು ಸೃಷ್ಟಿಸಿದೆ. ಯಾರೀ ವಲಸೆಗಾರರು? ಇವರು ಪಾಕಿಸ್ಥಾನದಿಂದ ಬಂದವರೇ? ಬಾಂಗ್ಲಾ, ಶ್ರೀಲಂಕಾದಿಂದ ಬಂದವರೇ? ಆಫ್ರಿಕಾ, ಆಷ್ಟ್ರೇಲಿಯಾ, ಯುರೋಪಿನಿಂದ ಬಂದವರೇ? ಆಶ್ಚರ್ಯ ಎಂದರೆ ಕೆ.ಆರ್.ಎಂ.ಎಂ. ಹೇಳುವ ವಲಸೆಗಾರರು ಅಪ್ಪಟ ಭಾರತೀಯರೇ! ಭಾರತದ ಸಂವಿಧಾನ ಭಾರತೀಯರೆಲ್ಲರಿಗೂ ದಯಪಾಲಿಸಿರುವ ಅಮೂಲ್ಯ ಹಕ್ಕು ಭಾರತದ ಗಡಿಯೊಳಗೆ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಬಹುದು ಅಥವಾ ಆ ಪ್ರದೇಶಗಳಲ್ಲಿ ವಾಸಮಾಡಬಹುದು ಎನ್ನುತ್ತದೆ. ಈ ಹಕ್ಕಿನ ಆಧಾರದ ಮೇಲೆಯೇ ಕೊಡಗಿನವರು ಮೈಸೂರಿನಲ್ಲಾಗಲಿ, ಬೆಂಗಳೂರಿನಲ್ಲಾಗಲಿ, ಮುಂಬಯಿಯಲ್ಲಾಗಲಿ ಅಥವಾ ದೆಹಲಿಯಲ್ಲಾಗಲಿ ವಾಸ ಮಾಡುತ್ತಿರುವುದು. ಅಲ್ಲೆಲ್ಲ ಆಸ್ತಿ-ಪಾಸ್ತಿ ಮಾಡಿ ಜೀವನ ನಡೆಸುತ್ತಿರುವುದು. ಅಲ್ಲೆಲ್ಲಾ ನೆಲೆಸುವುದು ಕೊಡಗಿನವರಿಗೆ ಹೇಗೆ ''ಹಕ್ಕಾ''ಗುತ್ತದೋ ಅಥವಾ ಅಲ್ಲೆಲ್ಲಾ ಹುದ್ದೆಗಳಲ್ಲಿ ಮುಂದುವರಿಯುವುದು ಹೇಗೆ ಕೊಡಗಿನವರ ''ಆಜನ್ಮ ಹಕ್ಕಾ'' ಗುತ್ತದೋ ಅದೇ ರೀತಿ ಭಾರತದಲ್ಲಿನ ಯಾವುದೇ ರಾಜ್ಯದ ಜನರಿಗೂ ಕೂಡ ಕೊಡಗಿನವರಂತೆಯೇ ಈ ರೀತಿಯ ಸಂವಿಧಾನದತ್ತ ಮೂಲಭೂತವಾದ ಹಕ್ಕಿರುತ್ತದೆ ಎಂಬುದನ್ನು ನಾವು ಮರೆಯಬಾರದು. ಕೊಡಗಿನಲ್ಲಿ ನೆಲೆಸಿರುವ ''ಮೂಲನಿವಾಸಿಗಳಲ್ಲದವರು'' ಎಂದರೆ ಅವರು ವಲಸೆಗಾರರಾಗುತ್ತಾರೆ. ಕೆ.ಆರ್.ಎಂ.ಎಂ. ಗುರುತಿಸುವಂತೆ ಮುಖ್ಯವಾಗಿ ''ಮಲೆಯಾಳಿಗಳು- ತಮಿಳರು- ಕರ್ನಾಟಕದವರು .......'' ವಲಸೆಗಾರರು. ಹೀಗಾಗಿ ಇವರೆಲ್ಲಾ ಮುಸಲ್ಮಾನ, ಕ್ರಿಶ್ಚಿಯನ್, ಬ್ರಾಹ್ಮಣ, ಲಿಂಗಾಯಿತ, ದುಡಿಯುವ ಸಮುದಾಯಗಳು, ಕೂಲಿವರ್ಗದ ಸಮುದಾಯದವರಾಗುತ್ತಾರೆ. ಹುಟ್ಟಿನಾಧಾರದ ಮೇಲೆ ಇವರೆಲ್ಲರನ್ನು ''ಕ್ರಿಮಿನಲ್'' ಗಳೆಂದು ಗುರುತಿಸುವ ಕೆ.ಆರ್.ಎಂ.ಎಂ. ಸಂವಿಧಾನ ವಿರೋಧಿಯಾಗಿದೆ. ''ಕೊಡವನಾಗಿ ಹುಟ್ಟಿದ್ದು ನನ್ನ ತಪ್ಪಾ?'' ಎನ್ನುವ ಕೆ.ಆರ್.ಎಂ.ಎಂ.ನ ಏಕೈಕ ವಕ್ತಾರರಿಗೆ ಇವರೆಲ್ಲಾ ಮಲೆಯಾಳಿಗಳಾಗಿ, ತಮಿಳರಾಗಿ, ಕ್ರಿಶ್ಚಿಯನ್ನರಾಗಿ, ಮುಸಲ್ಮಾನರಾಗಿ, ಬ್ರಾಹ್ಮಣರಾಗಿ, ಲಿಂಗಾಯಿತರಾಗಿ ಅಥವಾ ಒಕ್ಕಲಿಗರಾಗಿ ಹುಟ್ಟಿದ್ದು ತಪ್ಪಾ ಎಂದು ಏಕೆ ಅನ್ನಿಸುವುದಿಲ್ಲ? ಕೊಡಗಿನ ''ಮೂಲನಿವಾಸಿಗಳ'' ಸಾವಿರಾರು ಎಕರೆ ಕಾಡನ್ನು ಹೊನ್ನಿನ ಎಸ್ಟೇಟುಗಳನ್ನಾಗಿ ಮಾಡಲು ಶತಮಾನಗಳಿಂದ ಗಾಣದೆತ್ತುಗಳಾಗಿ ರಕ್ತವನ್ನು ಚೆಲ್ಲಿ ದುಡಿದ ಈ ವರ್ಗಗಳು ಇಂದು ಈ ರೀತಿಯ ಫಾಸಿಸ್ಟ್‌ಗಳಿಂದ ಭಯಭೀತಿಗೊಳಗಾಗಿವೆ. ತಮ್ಮ ಸಾವಿರಾರು ಎಕ್ರೆಗಳಲ್ಲಿನ ಮರಗಳನ್ನು ಟಿಂಬರ್‌ಗಳ್ಳರಿಗೆ ಮಾರಿ, ತೋಟ ಮಾಡಿ ''ಗಣ್ಯರಾದ ಮೂಲನಿವಾಸಿಗಳು'' ಇಂದು ಕಾಡು ಬೆಳೆಸಲು - ಉಳಿಸಲು ಕರೆಕೊಡುತ್ತಿರುವುದು ಹಾಗೂ ಕಾಡು ಭಕ್ಷಣೆಗೆ ಕೂಲಿ ವರ್ಗಗಳ ಕಡೆ ಬೊಟ್ಟು ಮಾಡುವುದು ನಾಚಿಕೆಗೇಡು ಎಂದು ಇಂದಿಗೂ ಇವರಿಗೆಲ್ಲಾ ಅನ್ನಿಸದಿರುವುದು ಖೇದಕರ. ಕೊಡಗಿನ ನೆಲದ ಪ್ರಕೃತಿದತ್ತವಾದ ಮರಗಳನ್ನು ಖಾಲಿ ಮಾಡಿ, ಪ್ರಕೃತಿ ವಿರೋಧಿ ಯೂಕಲಿಪ್ಟಸ್ ಗಿಡಗಳನ್ನು ಬೆಳೆಸುವವರು ಕೊಡಗಿನ ಪರಿಸರ ಉಳಿಸಲು ''ವಲಸೆಗಾರರ'' ಮೇಲೆ ಹರಿಹಾಯುವುದು ಕೂಡ ಅಷ್ಟೇ ಹಾಸ್ಯಾಸ್ಪದ ವಿಷಯವಾಗಿದೆ.

''ವಲಸೆಗಾರರು'' ಎಂದು ಗುರುತಿಸಲ್ಪಡುವ ವರ್ಗಗಳಲ್ಲಿ ಹೆಚ್ಚಿನವರು ಒಂದು ಕಾಲದಲ್ಲಿ ಕೂಲಿಗಳಾಗಿ ಜೀವನ ಮಾಡುತ್ತಿದ್ದವರು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಇವರಿಗೂ ಸ್ವಾತಂತ್ರ್ಯ ಬಂದಿತ್ತು ಎಂದು ಕೆ.ಆರ್.ಎಂ.ಎಂ. ಏಕೆ ತಿಳಿಯುವುದಿಲ್ಲ? ಅವರ ಮಕ್ಕಳು ಕಷ್ಟಪಟ್ಟು ಓದಿ ವಿದ್ಯಾಭ್ಯಾಸ ಮಾಡಿ ನೌಕರಿ ಗಿಟ್ಟಿಸಿದರೆ, ಜಿಲ್ಲಾ ಪರಿಷತ್‌ಗಳ ಅಧ್ಯಕ್ಷರಾದರೆ, ಲೋಕಸಭೆ - ವಿಧಾನಸಭೆಗಳ ಸದಸ್ಯರಾದರೆ ಅಥವಾ ವ್ಯಾಪಾರ ಮಾಡಿ ತಮ್ಮ ಕುಟುಂಬ ವರ್ಗದವರು ಈ ಪ್ರಜಾತಾಂತ್ರಿಕ, ಜಾತ್ಯಾತೀತ ವ್ಯವಸ್ಥೆಯಲ್ಲಿ ಮರ್ಯಾದೆಯಲ್ಲಿ ಎಲ್ಲರಂತೆ ಬದುಕುತ್ತೇನೆಂದರೆ ಯಾಕೆ ಅಸೂಯೆಪಡಬೇಕು? ''ಮೂಲನಿವಾಸಿಗಳು'' ದೇವಲೋಕದಿಂದ ಇಳಿದವರು; ಮುಗ್ಧರು; ಅಮಾಯಕರು ಎಂದೇಕೆ ತಿಳಿಯಬೇಕು? ಕಾಡುಗಳ್ಳರು, ನಿಸರ್ಗ ವಿರೋಧಿಗಳು, ಭ್ರಷ್ಟರು, ತಲೆಹಿಡುಕರು ಯಾವುದೋ ಒಂದು ವರ್ಗಕ್ಕೆ ಅಥವಾ ಸಮುದಾಯಕ್ಕೆ ಮಾತ್ರ ಮೀಸಲಾಗಿರುವುದಿಲ್ಲ. ಎಲ್ಲಾ ವರ್ಗಗಳಲ್ಲೂ ಒಳ್ಳೆಯವರು-ಕೆಟ್ಟವರಿರುತ್ತಾರೆ. ಆದ್ದರಿಂದ ಯಾರದ್ದಾದರು ಇರುವಿಕೆಯ ಹಕ್ಕಿಗೆ ಚ್ಯುತಿ ಬರುತ್ತದೆಯಾದರೆ ಅದು ಮಾನವ ವಿರೋಧಿಯಾಗುತ್ತದೆ. ಹಾಗಾಗಿ ಈ ಸಂದರ್ಭದಲ್ಲಿ ಅದು ಭಾರತದ ರಾಜ್ಯಾಂಗ ವಿರೋಧಿಯಾಗುತ್ತದೆ. ಮಾತು ಮಾತಿಗೂ ಮಹಾತ್ಮ ಗಾಂಧಿ-ನೆಲ್ಸನ್ ಮಂಡೇಲಾ - ಫಿಡೆಲ್ ಕ್ಯಾಸ್ಟ್ರೋರವರನ್ನು ಉಸುರುವ ಈ ಮಂದಿಗೆ ಅವರೆಲ್ಲಾ ಯಾವ ರೀತಿಯಲ್ಲಿ ಆದರ್ಶರೆಂದು ನನಗೆ ತಿಳಿಯುತ್ತಿಲ್ಲ. ಗಾಂಧಿ, ಮಂಡೇಲಾ, ಕ್ಯಾಸ್ಟ್ರೋರವರು ಜನಾಂಗ ವಿರೋಧಿಗಳಲ್ಲ; ಬ್ರಿಟಿಷ್ ಅಥವಾ ಅಮೇರಿಕನ್ ಸಾಮ್ರಾಜ್ಯಶಾಹಿ ಪ್ರೇಮಿಗಳಾಗಿ ಎಂದೂ ಇದ್ದವರಲ್ಲ. ಜಾತಿ, ಪ್ರಾಂತ್ಯ, ಬಣ್ಣ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಳ್ಳದೆ ಮನುಷ್ಯರನ್ನು ಪ್ರೀತಿಸುವ ಔದಾರ್ಯ ಅವರೆಲ್ಲರ ಜೀವನ ಧರ್ಮವಾಗಿತ್ತು. ಮಹಾತ್ಮ ಗಾಂಧಿಯವರಂತೂ ಭಾರತೀಯರೆಲ್ಲ ಅದರಲ್ಲೂ ಹಿಂದೂ, ಮುಸಲ್ಮಾನ, ಕ್ರಿಶ್ಚಿಯನ್, ದಲಿತರೆಲ್ಲರೂ ಒಂದೇ ಎಂದು ಹಿಂದು-ಮುಸ್ಲಿಂ ಭಾವೈಕ್ಯತೆಗಾಗಿ ಪ್ರಾಣವನ್ನೇ ಕೊಟ್ಟರು. ಭಾರತೀಯರೊಳಗಡೆಯೇ ಭೇದ ಹುಟ್ಟಿಸಿ, ಇವರು ''ವಲಸೆಗಾರರು'' ಅವರು ''ಮೂಲನಿವಾಸಿಗಳು'' ಎಂದು ವಿಷ ಹಾಕಿ ದೇಶವನ್ನು ಒಡೆಯುವ ಪ್ರಯತ್ನವನ್ನು ಎಂದೂ ಮಾಡಲಿಲ್ಲ ಎಂಬುದನ್ನು ನಾವೆಲ್ಲ ಈ ಸಂದರ್ಭದಲ್ಲಿ ಗಮನಿಸಬೇಕು. ದ್ವೇಷದಿಂದ ಏನನ್ನೂ ಸಾಧಿಸಲಾಗುವುದಿಲ್ಲ ಎಂಬುದನ್ನು ನಮ್ಮ ಬಂಧುಗಳು ಅರ್ಥಮಾಡಿಕೊಳ್ಳಲಿ.

**ಕೊಡಗಿಗೆ ಬಂದ ಕೇರಳದ ದೇವರುಗಳು**

ಕೊಡಗಿನ ಚರಿತ್ರೆಯನ್ನು ಗಮನಿಸುವುದಾದರೆ ಸಾವಿರಾರು ವರ್ಷಗಳಿಂದಲೂ ತಮಿಳು-ಮಲೆಯಾಳ-ಕರ್ನಾಟಕ ಪ್ರದೇಶಗಳ ಸಂಪರ್ಕವನ್ನು ನಾವು ನೋಡಬಹುದು. ಚೋಳ, ಕದಂಬರ ಚರಿತ್ರೆ ಕೂಡ ಇದನ್ನೇ ಹೇಳುತ್ತದೆ. ಈ ಸಂಪರ್ಕಗಳು ಒಂದು ರೀತಿಯ ಭ್ರಾತೃತ್ವದ ಸಂಕೇತ ಎಂದರೂ ತಪ್ಪಾಗಲಾರದು. ಕೊಡವರ ಮೂಲಪುರುಷರು

ಕದಂಬ ವಂಶಜರು ಎನ್ನುವವರೆಗೂ ಈ ಸೌಹಾರ್ದತೆ ಇದೆ. ಕೊಡಗು ಮತ್ತು ಕೇರಳದ ಸಂಬಂಧ ಕೂಡ ಹೀಗೆಯೇ. ನಮಗೆಲ್ಲಾ ಗೊತ್ತಿರುವಂತೆ ಕೊಡಗಿನ ಜನರೆಲ್ಲರ "ಒಕ್ಕ"ದ (ಅವಿಭಾಜ್ಯ ಕುಟುಂಬ) ಮೂಲ ಪುರುಷ "ಕಾರಣ". ಜಮ್ಮ ಭೂಮಿಯ ಪ್ರತೀಕವಾದ ಒಕ್ಕದ ಮೂಲಪುರುಷ "ಕಾರಣ"ನ ಪೂಜೆಯ ಸಂದರ್ಭದಲ್ಲಿ ಮೈಮೇಲೆ ಬಂದ "ಕಾರಣ" ಕೂಗುವುದು ಕೇರಳದಲ್ಲಿರುವ ಬೈತೂರಪ್ಪನನ್ನೇ. ಆನಂತರ ಬಾಕಿ ಇರುವ ಕಾರುಬಾರು ನಡೆಯುತ್ತದೆ. ಎಲ್ಲಾ ಕೊಡವ ಭಾಷಿಕ "ಒಕ್ಕ"ಗಳು ಪ್ರತಿ ವರ್ಷ ಈ ಬೈತೂರಪ್ಪನ ಸನ್ನಿಧಿಗೆ ತಮ್ಮ ಪ್ರತಿನಿಧಿಯನ್ನು ಶಾಸ್ತ್ರ, ಮಡಿ, ವಿಧಿಗಳ ಪ್ರಕಾರ ಕಳಿಸುವುದು ಇಂದೂ ಚಾಲ್ತಿಯಲ್ಲಿದೆ. ಕೊಡಗಿನ ದೈವಗಳಾದ ಕಾಞರಾಟಪ್ಪ, ತರ್ ಚಂಬಿರಪ್ಪ, ಚಂದ್ರಕೋಲಪ್ಪ, ಇಗ್ಗುತಪ್ಪ, ಪಾಲೂರಪ್ಪ, ತಿರುನೆಲ್ಲಿ ಪೆಮ್ಮಯ್ಯ ಹಾಗೂ ಪನ್ನಂಗಾಲತಮ್ಮೆ ತಮ್ಮ ಮೂಲವನ್ನು ಕೇರಳದ ವೈನಾಡು ಮಲಬಾರುಗಳಲ್ಲಿ ಹೊಂದಿವೆ ಎಂಬುದನ್ನು ನಾವು ಗಮನಿಸಬೇಕು. ಇಗ್ಗುತ್ತಪ್ಪ, ಪಾಲೂರಪ್ಪ ಹಾಗೂ ಪನ್ನಂಗಾಲತಮ್ಮೆ ಇಂದು ನಾವು ಗುರುತಿಸುವ ಕೊಡಗಿನಲ್ಲಿದ್ದರೆ ಮಿಕ್ಕವೆಲ್ಲಾ ಕೇರಳದಲ್ಲಿವೆ. ಆ ಕಾಲದಲ್ಲಿ ಕೊಡಗು-ಕೇರಳ ಎಂದು ದ್ವೇಷ ಕಾರುವ ಪ್ರವೃತ್ತಿ ಜನರಲ್ಲಿರಲಿಲ್ಲ. ಏಕೆಂದರೆ ಅದೊಂದು ಸಾಂಸ್ಕೃತಿಕ ಕೊಂಡಿಯಾಗಿತ್ತು. ಇಂದು ಕೂಡ ಆ ಸಾಂಸ್ಕೃತಿಕ ಕೊಂಡಿ ಜೀವಂತವಾಗಿದೆ. ಅದನ್ನು ಬೆಸೆಯಬೇಕೇ ವಿನಃ ಬೇರೆ ಬೇರೆ ಮಾಡಬಾರದು. ಒಂದು ವೇಳೆ ವಲಸೆಗಾರರನ್ನು ತೊಲಗಿಸುವುದಾದರೆ ಮಲೆಯಾಳಿ ಹಿನ್ನೆಲೆಯ ಈ ದೈವಗಳನ್ನೂ ಕೆ.ಆರ್.ಎಂ.ಎಂ. ತೊಲಗಿಸುತ್ತದೆಯೇ ಎನ್ನುವ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಹಾಗೆ ಮಾಡುವುದಾದರೆ ಕೊಡಗಿನ "ಒಕ್ಕಗಳು" ಅಥವಾ ಅವುಗಳಿಗೆ ಬೆಸೆದುಕೊಂಡಿರುವ "ಕಾರಣ"ನ ಭವಿಷ್ಯವೇನು ಎಂಬುದನ್ನು ನಾವೆಲ್ಲ ಯೋಚಿಸಬೇಕಾಗಿದೆ.

**ವಿಶ್ವಸಂಸ್ಥೆಗೆ ದೂರೇಕೆ ನೀಡಿದರು?**

"ಅಖಂಡ ಭಾರತದಲ್ಲಿ ಸುಂದರ ಕೊಡಗು" ಎನ್ನುವ ಘೋಷಣೆಯನ್ನು ಇತ್ತೀಚಿನವರೆಗೂ ಮಾಡುತ್ತಿದ್ದ ಕೆ.ಆರ್.ಎಂ.ಎಂ. ಈಗ ತನ್ನ ಬೇಡಿಕೆಗಾಗಿ ವಿಶ್ವಸಂಸ್ಥೆಗೆ ನೇರವಾಗಿ ಮೊರೆಹೊಕ್ಕಿರುವುದು ಅನೇಕ ಹೊಸ ಸಂಶಯಗಳಿಗೆ ಆಸ್ಪದ ನೀಡಿದೆ. "ಪ್ರತ್ಯೇಕ ರಾಜ್ಯ" ಕೇಳುವುದು ನಮ್ಮ "ಸಂವಿಧಾನಿಕ ಹಕ್ಕು" ಎಂದು ಯಾವಾಗಲೂ ಕೆ.ಆರ್.ಎಂ.ಎಂ. ಹೇಳುತ್ತಿರುತ್ತದೆ. ಕೊಡಗಿನಲ್ಲಿ ಆಗುತ್ತಿರುವ ದೌರ್ಜನ್ಯಗಳ ಬಗ್ಗೆ "ಮಾನವ ಹಕ್ಕುಗಳ ಆಯೋಗಕ್ಕೆ" ಕೂಡ ಕೆ.ಆರ್.ಎಂ.ಎಂ. ದೂರು ಸಲ್ಲಿಸಿದೆ (ಮಾವನ ಹಕ್ಕುಗಳ ಹೋರಾಟಗಳು ಭಾರತದ ಉಪಖಂಡವನ್ನು ಬೇರೆ ಬೇರೆ ರೀತಿಗಳಲ್ಲಿ ಛಿದ್ರಗೊಳಿಸುವ ಮೂಲಕ ಬೃಹತ್ ರಾಷ್ಟ್ರೀಯ ಕಂಪನಿಗಳ ಮಾರುಕಟ್ಟೆ ಮಾಡುವ ಹುನ್ನಾರಗಳ ಬಗೆಗಳನ್ನು ಖ್ಯಾತ ಪತ್ರಕರ್ತೆ ಚಿತ್ರಾ ಸುಬ್ರಮಣ್ಯಂ ಇಂಡಿಯನ್

ಎಕ್ಸ್‌ಪ್ರೆಸ್‌ನ ಇತ್ತೀಚಿನ ಲೇಖನವೊಂದರಲ್ಲಿ ವಿವರಿಸಿರುವುದನ್ನು ಗಮನಿಸಬೇಕು). ಯಾವ ''ಮಾನವರ'' ಮೇಲಿನ ದೌರ್ಜನ್ಯದ ವಿರುದ್ಧ ದೂರಿದು? ಕೆಂಬಟ್ಟಿ, ಕಾಪಾಳ, ಎರವ ಅಥವಾ ಕೊಡಗಿನ ಯಾವುದೇ ದಲಿತ ಹಿಂದುಳಿದ ವರ್ಗಗಳ ಮೇಲಿನ ''ಸಾಂಸ್ಕೃತಿಕ'' ದೌರ್ಜನ್ಯ ಅಥವಾ ಶೋಷಣೆಯ ವಿರುದ್ಧವೇ? ಅಥವಾ ಕನಿಷ್ಟ ವೇತನಕ್ಕಾಗಿ ಮೊರೆಯಿಡುತ್ತಿರುವ ದುಡಿಯುವ ವರ್ಗದ ಮೇಲಿನ ದೌರ್ಜನ್ಯದ ವಿರುದ್ಧವೇ? ಎಂದರೆ ಖಂಡಿತವಾಗಿಯೂ ಅಲ್ಲ. ಇಷ್ಟಕ್ಕೂ ''ಸಂವಿಧಾನಾತ್ಮಕ ಹೋರಾಟ'' ನಡೆಸುತ್ತಿದ್ದೇವೆ ಎನ್ನುವ ಕೆ.ಆರ್.ಎಂ.ಎಂ. ಯಾವುದೋ ಅನ್ಯ ದೇಶದವರಂತೆ ''ಅಖಂಡ ಭಾರತವನ್ನು'' ಬಿಟ್ಟು ''ವಿಶ್ವಸಂಸ್ಥೆಗೆ'' ದೂರು ಸಲ್ಲಿಸುವ ಅಥವಾ ಅಲ್ಲಿಂದ ''ನ್ಯಾಯ'' ಪಡೆವ ಯತ್ನಗಳು ನಮ್ಮ ಸಂಶಯಗಳಿಗೆ ಕಾರಣವಾಗಿವೆ. ಭಾರತ ಸರ್ಕಾರದ ಉತ್ತರಕ್ಕೆ ಕಾಯುವ ವ್ಯವಧಾನವಿಲ್ಲದೆ ನೇರವಾಗಿ ಅಮೇರಿಕಾ ಸಾಮ್ರಾಜ್ಯಶಾಹಿಗಳ ಹಿಡಿತದಲ್ಲಿರುವ ವಿಶ್ವಸಂಸ್ಥೆಗೆ ''ನ್ಯಾಯಕ್ಕಾಗಿ'' ಮೊರೆಹೋಗಿರುವುದು ಕೆ.ಆರ್.ಎಂ.ಎಂ.ನ ಸಿದ್ಧಾಂತಗಳ ಸ್ಲೋಗಲಾಡಿತನಕ್ಕೆ ಒಂದು ಮುಖ್ಯ ಸಾಕ್ಷಿಯಾಗಿದೆ.

**ಮಡಿಕೇರಿ ಬಿಟ್ಟರೆ ದೆಹಲಿಯೇ ರಾಜಧಾನಿ**

ಕೊಡಗನ್ನು ಒಂದು ರಾಜ್ಯವನ್ನಾಗಿ ಮಾಡಿದರೆ ಅದರ ರಾಜಧಾನಿ ಮಡಿಕೇರಿಯಾಗುತ್ತದೆ. ಹೈಕೋರ್ಟು ಕೂಡ ಮಡಿಕೇರಿಯಲ್ಲಾಗುತ್ತದೆ. ಹಾಗೆಯೇ ಮುಖ್ಯಮಂತ್ರಿ, ಐ.ಜಿ.ಪಿ.ಯಂಥ ಪೋಲೀಸ್ ಮುಖ್ಯಸ್ಥರ ಅಥವಾ ಮುಖ್ಯ ಕಾರ್ಯದರ್ಶಿಗಳ ಕಛೇರಿ ಕೂಡ ಮಡಿಕೇರಿಯಲ್ಲಿರುತ್ತದೆ. ಮಡಿಕೇರಿಯಲ್ಲಿ ನ್ಯಾಯ ದೊರೆಯದಿದ್ದರೆ ಜನರಿಗಿರುವ ಕೊನೆಯ ಅವಕಾಶ ದೆಹಲಿ ಮಾತ್ರ. ನ್ಯಾಯಕ್ಕಾಗಿ, ಸಂಪರ್ಕಕ್ಕಾಗಿ ಎಲ್ಲದಕ್ಕೂ ದೆಹಲಿ ಕೇಂದ್ರವಾಗುತ್ತದೆ. ಕೊಡಗಿನ ಬಡವರಿಗೆ, ಹಿಂದುಳಿದವರಿಗೆ ಹಾಗೂ ದುಡಿಯುವ ವರ್ಗದವರಿಗೆ ಮಡಿಕೇರಿಗೆ ಬಂದು ಹೋಗುವುದು ಈಗಲೂ ದುಸ್ತರವಾಗಿರುವಾಗ ಅವರ ದೆಹಲಿಯ ಪ್ರಯಾಣ ಮರೀಚಿಕೆಯೇ. ಜುಜುಬಿ ಎನ್ನಿಸುವ ''ಕೊಡವ'' ಸಾಹಿತ್ಯ ಅಕಾಡೆಮಿಯ ರಾಜಕಾರಣವನ್ನು ವರ್ಷಗಳಿಂದಲೂ ಕೊಡಗಿನ ಹಿಂದುಳಿದ ವರ್ಗಗಳು ಪ್ರತಿಭಟಿಸುತ್ತಿದ್ದರೂ ಏನೂ ಪ್ರಯೋಜನವಾಗಿಲ್ಲ. ಬೆಂಗಳೂರಿಗೆ ನ್ಯಾಯಕ್ಕಾಗಿ ಪ್ರಯಾಸದಲ್ಲಾದರೂ ಹೋಗಿಬರಲಿಕ್ಕಾಗುತ್ತದೆ. ಮೂಲೆಗೊತ್ತಲ್ಪಟ್ಟ ಸಮುದಾಯಗಳು ನ್ಯಾಯಕ್ಕಾಗಿ ದೆಹಲಿಗೆ ಹೋಗುವುದು ಕನಸಿನ ಮಾತೇ ಸರಿ. ಹೀಗಾಗಿ ಪ್ರತ್ಯೇಕ ರಾಜ್ಯದ ಬೇಡಿಕೆ ಹಣವಿರುವ ಬಲಾಢ್ಯವರ್ಗಗಳಿಗೆ ವರದಾನವಾಗಿಯೂ, ಬಡಜನತೆಗೆ ಮೃತ್ಯುಕೂಪವಾಗಿಯೂ ಪರಿಣಮಿಸುವುದರಲ್ಲಿ ಯಾವ ಸಂಶಯವೂ ಇಲ್ಲ.

**೬೦೦ ಕೋಟಿ ರೂಪಾಯಿ ಆದಾಯ ಎನ್ನುವ ಸುಳ್ಳಿನ ಮರ್ಮ**

ಕೆ.ಆರ್.ಎಂ.ಎಂ. ''ಕೊಡಗಿಗೆ ೬೦೦ ಕೋಟಿ ರೂಪಾಯಿ ಆದಾಯ ಇದೆ. ಇಷ್ಟೊಂದು ಆದಾಯವಿದ್ದರೂ ಕೊಡಗು ಇವತ್ತು ಕರ್ನಾಟಕದ ಹಂಗಿನಲ್ಲಿರಬೇಕಾಗಿದೆ''

ಎನ್ನುತ್ತದೆ. ಹಾಗೆಯೇ ೬೦೦ ಕೋಟಿ ರೂಪಾಯಿ ಆದಾಯ ಎನ್ನುವುದನ್ನು ೬೦೦ ಕೋಟಿ ತೆರಿಗೆ ಎಂದು ಅದರ ವಕ್ತಾರರು ಅನೇಕ ಬಾರಿ ವಿಶ್ಲೇಷಿಸಿ ಜನರನ್ನು ತಪ್ಪು ದಾರಿಗೆ ಎಳೆದಿದ್ದಾರೆ (ರಾಷ್ಟ್ರಪತಿ, ಪ್ರಧಾನ ಮಂತ್ರಿಗಳಿಗೆ ಈಗಾಗಲೇ ಹಲವು ಬಾರಿ ನೀಡಿರುವ ಮನವಿಗಳಲ್ಲಿ ಈ ವಿಚಾರ ಪ್ರಸ್ತಾಪವಾಗಿದೆ). ಜಿಲ್ಲೆಯ ಉಸ್ತುವಾರಿ ಮಂತ್ರಿ, 'ಕೊಡಗು ೭೨ ಕೋಟಿ ತೆರಿಗೆ ನೀಡುತ್ತದೆ' ಎಂದು ಅಧಿಕೃತವಾಗಿ ತಿಳಿಸಿದ್ದಾರೆ. ವಸ್ತು ಸ್ಥಿತಿ ಏನೆಂದರೆ ಕೊಡಗಿಗೆ ೬೦೦ ಕೋಟಿ ರೂಪಾಯಿ ಆದಾಯ ಅಥವಾ ಹೆಚ್ಚೇ ಇರಬಹುದು. ಆದರೆ ತೆರಿಗೆ ಕಟ್ಟುವುದು ೭೨ ಕೋಟಿ ರೂಪಾಯಿ ಮಾತ್ರ. ಪರಿಸ್ಥಿತಿ ಹೀಗಿರುವಾಗ ''ಆದಾಯ'' ಮತ್ತು ''ತೆರಿಗೆ'' ಎಂದರೆ ಒಂದೇ ಎನ್ನುವ ಅರ್ಥ ಕೊಡುತ್ತಾ ''ತೆರಿಗೆ'' ಅಂಶವನ್ನು ಮಾತ್ರ ವರ್ಣರಂಜಿತವಾಗಿ ಹೇಳುವುದನ್ನು ನೋಡಿದರೆ ಮಧ್ಯಮ ಹಾಗೂ ಮೇಲು ವರ್ಗದ ಹಿತಾಸಕ್ತಿಗಳನ್ನು ಮಾತ್ರ ಕೆ.ಆರ್.ಎಂ.ಎಂ. ಪ್ರತಿನಿಧಿಸುವಂತೆ ಗೋಚರಿಸುತ್ತದೆ.

## ಜಾಗತೀಕರಣದಂತಹ ಸಮಸ್ಯೆಗಳು ಕೊಡಗಿಗೆ ಮಾತ್ರ ಮೀಸಲೇ?

ನಿರುದ್ಯೋಗ, ಪರಿಸರ, ಸಂಸ್ಕೃತಿಗೆ ಸಂಬಂಧಿಸಿದ ಸಮಸ್ಯೆಗಳು ಭಾರತದಲ್ಲೆಲ್ಲಾ ಸಾರ್ವತ್ರಿಕವಾದುವು. ಬಳ್ಳಾರಿಯಲ್ಲಿ ಕಲ್ಲಿದ್ದಲು ಗಣಿಗಳಾಗಲಿ, ಹರಿಹರದಲ್ಲಿ ಕಾರ್ಖಾನೆಗಳಾಗಲಿ, ಕೈಗಾದಲ್ಲಿ ಪರಮಾಣು ಕೇಂದ್ರವಾಗಲಿ, ಮಂಗಳೂರಿನಲ್ಲಿ ಎಂ.ಆರ್.ಪಿ.ಎಲ್. ಉದ್ಯಮಗಳಾಗಲಿ, ಮೈಸೂರಿನಲ್ಲಿ ಕಾವೇರಿಗೆ ಅಣೆಕಟ್ಟಾಗಲಿ. ಅವ್ಯಾವುದೂ ಕೊಡಗಿಗೆ ಬೇಡ ಎಂದರೆ ಹೇಗೆ? ಕೊಡಗಿನವರಿಗೆ ವಿದ್ಯುಚ್ಛಕ್ತಿ ಬೇಕು, ಕಾರುಗಳು-ವಾಹನಗಳು ಬೇಕು, ಮತ್ತಿತರ ಸಿದ್ಧ ವಸ್ತುಗಳು ಬೇಕು. ಆದರೆ, ಅವುಗಳನ್ನು ತಯಾರಿಸುವಾಗ ಆಗುವ 'ಪರಿಸರ ಹಾನಿ' ಬೇಡ ಎಂದರೆ ಈ ದೇಶದ ಪ್ರಜಾತಾಂತ್ರಿಕ ಸೌಹಾರ್ದತೆಗೆ ಧಕ್ಕೆ ಬರುವುದರಲ್ಲಿ ಯಾವುದೇ ಸಂಶಯವಿಲ್ಲ. ಇದರರ್ಥ ಏನೆಂದರೆ ಬಂಡವಾಳಶಾಹಿ ವ್ಯವಸ್ಥೆ ಹಾಗೂ ಜಾಗತೀಕರಣದಂಥ ಸಮಸ್ಯೆಯಿಂದ ಇಡೀ ಭಾರತವೇ ತತ್ತರಿಸುತ್ತಿದೆ. ಪರಿಸ್ಥಿತಿ ಹೀಗಿರುವಾಗ ಕೊಡಗಿನಲ್ಲಿ ಮಾತ್ರ ''ಸಂಸ್ಕೃತಿ ಉಳಿಸುವ'' ''ಪರಿಸರ ಉಳಿಸುವ'' ಹಾಗೂ ಓಬಿರಾಯನ ಕಾಲದ ''ವ್ಯವಸ್ಥೆ'' ಈ ಸಮಸ್ಯೆಗಳಿಗೆಲ್ಲಾ ಪರಿಹಾರವೆಂದರೆ ಹಾಸ್ಯಾಸ್ಪದವಾಗುತ್ತದೆ. ಕೊಡಗಿನ ನೆರೆ ಜಿಲ್ಲೆಗಳಲ್ಲೇಕೆ, ಭಾರತದ ಯಾವುದೇ ಮೂಲೆಯಲ್ಲಿ ಕೂಡ ಪರಿಸರ ಹಾನಿಯಾದರೆ ಅದರ ಪರಿಣಾಮ ಕೊಡಗಿನ ಮೇಲೂ ಬಿರುತ್ತದೆ. ಪರಿಸರ ಇಡೀ ಭೂಮಿಗೆ ಸಂಬಂದಿಸಿದ್ದು. ಕೊಡಗಿನ ಪರಿಸರ ಹಾನಿಯಾಗಲು ಅಮೆರಿಕಾ ಅಥವಾ ಪಶ್ಚಿಮ ರಾಷ್ಟ್ರಗಳಲ್ಲಾಗುತ್ತಿರುವ ಮಾಲಿನ್ಯ ಕೂಡ ಬಹಳಮಟ್ಟಿಗೆ ಕಾರಣವಾಗುತ್ತದೆ ಎನ್ನುವ ಜ್ಞಾನದ ತಿಳುವಳಿಕೆ ಇಲ್ಲದೆ ಕೊಡಗಿನ ಪರಿಸರವನ್ನು ಮಾತ್ರ ಉಳಿಸೋಣ ಎಂದು ಹೋರಾಟ ಮಾಡಿದರೆ ಮೂರ್ಖತನವಾಗುತ್ತದೆ. ಕೊಡಗಿಗೊಂದು ಪರಿಸರ, ಮೈಸೂರಿಗೊಂದು ಪರಿಸರ, ಕೇರಳಕ್ಕೊಂದು ಪರಿಸರ ಎನ್ನುವುದೊಂದಿಲ್ಲ ಎನ್ನುವ ಸಾಮಾನ್ಯ ಜ್ಞಾನದ ತಿಳುವಳಿಕೆ ಇಲ್ಲಿ ಬಹಳ

ಮುಖ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ಜಾಗತೀಕರಣ ಹಾಗೂ ಬಂಡವಾಳಶಾಹಿ ಹುಟ್ಟುಹಾಕಿದ ವ್ಯವಸ್ಥೆಯ ಬಗ್ಗೆ ಚಕಾರವೆತ್ತದೆ ಸ್ಥಳೀಯ ಸಮಸ್ಯೆಗಳನ್ನು ಗತಕಾಲದ ವೈಭವದೊಂದಿಗೆ ಆಲಾಪಿಸುವುದರಿಂದ ಸಮಸ್ಯೆಗಳ ಪರಿಹಾರ ಸಾಧ್ಯವಿಲ್ಲ. ಜಾಗತೀಕರಣದಂಥ ಸಮಸ್ಯೆಗಳನ್ನು ಬಗೆಹರಿಸಲು, "ಬಡತನ, ನಿರುದ್ಯೋಗ, ಅಭಿವೃದ್ಧಿ, ಸಂಪತ್ತಿನ ಹಂಚಿಕೆ " ಇತ್ಯಾದಿ ಸಮಸ್ಯೆಗಳಿಗೆ ಪರಿಹಾರಗಳು ಇಡೀ ಭಾರತದ ಜನರಿಗೆ ಬೇಕಾಗಿದೆ. ಇದು ಕೇವಲ ಕೊಡಗಿನ ಸಮಸ್ಯೆ ಎಂದು ತಿಳಿದುಕೊಂಡರೆ ಮೂರ್ಖತನವಾಗುತ್ತದೆ. ಕೋಲಾರದಲ್ಲಿ ಚಿನ್ನದ ಗಣಿಯಿರುವುದರಿಂದ ಸಹಸ್ರಾರು ಕೋಟಿ ರೂಪಾಯಿ ಆದಾಯವಿದೆ. ಬೆಂಗಳೂರಿನಲ್ಲಿ ಸಹಸ್ರಾರು ಕಾರ್ಖಾನೆಗಳಿರುವುದರಿಂದ ಕೋಟಿಗಟ್ಟಲೆ ಆದಾಯ ಬರುತ್ತಿದೆ. ಸಹಸ್ರಾರು ಕೋಟಿ ರೂಪಾಯಿ ಆದಾಯವಿದೆಯೆಂದು ಬೆಂಗಳೂರಿಗೊಂದು ರಾಜ್ಯವನ್ನು ಹಾಗೂ ಕೋಲಾರಕ್ಕೊಂದು ರಾಜ್ಯವನ್ನು ಕೇಳಲು ಸಾಧ್ಯವೇ?

ಕೊಡಗಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕರ್ನಾಟಕ ಸರ್ಕಾರ ವಿಫಲವಾಗಿದೆಯೆಂದೂ ಹಾಗೂ ಕೊಡಗನ್ನು ಈ ಮೂಲಕ ಕರ್ನಾಟಕ ಸಾಮ್ರಾಜ್ಯಶಾಹಿ ನಿರ್ಲಕ್ಷಿಸಿದೆಯೆಂದೂ ಕೆ.ಆರ್.ಎಂ.ಎಂ. ಹೇಳುತ್ತಿರುತ್ತದೆ. "ಎಚ್ಚೆತ್ತುಕೊಂಡ" ಸರಕಾರ ಕೊಡಗನ್ನು ಪ್ರಗತಿಯತ್ತ ಕೊಂಡೊಯ್ಯುವ ಕಾರ್ಯಕ್ರಮಗಳನ್ನು "ಅಭಿವೃದ್ಧಿ"ಯ ಹೆಸರಲ್ಲಿ ಹಮ್ಮಿಕೊಂಡಿದೆ. ಅಂತಹ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಕೊಡವ ಸಾಹಿತ್ಯ ಅಕಾಡೆಮಿಯ ಸ್ಥಾಪನೆಯೂ ಒಂದು. ಈಗಾಗಲೇ ವಿವರಿಸಿದಂತೆ ಕೊಡವ ಭಾಷಿಕರಾದ ೧೭ ಮೂಲನಿವಾಸಿ ಸಮುದಾಯಗಳಿದ್ದರೂ ಕೇವಲ ಕೊಡವ ಪಂಗಡದ ವ್ಯಕ್ತಿಗಳನ್ನು ಮಾತ್ರ ಅಕಾಡೆಮಿಯ ಸದಸ್ಯರನ್ನಾಗಿರಿಸಿರುವುದು ದುರ್ಬಲರನ್ನು ಸಾಂಸ್ಕೃತಿಕವಾಗಿ ಹಾಗೂ ಸಾಂವಿಧಾನಿಕವಾಗಿ ಮೂಲೆಗೊತ್ತುವ ಒಂದು ಸಫಲ ಪ್ರಯತ್ನ ಈ "ಅಭಿವೃದ್ಧಿ" ಕಾರ್ಯಕ್ರಮದಲ್ಲಾಗಿದೆ. ದಲಿತರ -ಹಿಂದುಳಿದ ವರ್ಗಗಳ -ಅಲ್ಪ ಸಂಖ್ಯಾಕರ ಮತ್ತು ದುಡಿಯುವ ವರ್ಗಗಳ ಅಭಿವೃದ್ಧಿಗಾಗಿ ಮಾಡಲೇಬೇಕಾದ ಮೀಸಲಾತಿ ಕಾರ್ಯಕ್ರಮಗಳ ಅನುಷ್ಠಾನಗೊಳಿಸುವುದು, ಸರ್ಕಾರಿ ಶಾಲೆಗಳನ್ನು ವ್ಯವಸ್ಥೆಯಲ್ಲಿಡುವುದು, ಉದ್ಯೋಗಾವಕಾಶವನ್ನು ಹೆಚ್ಚಿಸುವುದು, ಭೂ ಹೀನರಿಗೆ ಭೂಮಿಯನ್ನು ಹಂಚುವುದು, ಜನಸಾಮಾನ್ಯರಿಗಾಗಿ ರೈಲುಮಾರ್ಗ ನಿರ್ಮಿಸುವುದು, ಮೂಲಭೂತ ಅವಶ್ಯಕತೆಗಳಾದ ಕುಡಿಯುವ ನೀರು, ವಸತಿ, ಶಾಲೆ, ರಸ್ತೆ, ಆಸ್ಪತ್ರೆಗಳ ವ್ಯವಸ್ಥೆ ಮಾಡುವುದನ್ನು ಬಿಟ್ಟು ಸರ್ಕಾರ ಕೊಡಗಿನ ಅಭಿವೃದ್ಧಿಗಾಗಿ ವಿಶ್ವವಿದ್ಯಾಲಯ-ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಲು, ವಿಮಾನ ನಿಲ್ದಾಣವನ್ನು ಪ್ರತಿಷ್ಠಾಪಿಸಲು ಹಾಗೂ ಕೊಡಗನ್ನು ಪ್ರವಾಸೋದ್ಯಮ ಕೇಂದ್ರವನ್ನಾಗಿ ಮಾಡಿ ಕೊಡಗಿನ "ಸಾಂಸ್ಕೃತಿಕ ಹಿರಿಮೆಯನ್ನು" ಹರಡಲು ಕೋಟ್ಯಾಂತರ ರೂಪಾಯಿಗಳ ಯೋಜನೆಯನ್ನು ತಯಾರಿಸುತ್ತಿದೆ. ಕೋಟ್ಯಾಂತರ ರೂಪಾಯಿಗಳ ವಿದೇಶಿ ಬಂಡವಾಳ ಈಗಾಗಲೇ

ಕೊಡಗನ್ನು ಪ್ರವೇಶಿಸಿ ಪ್ರಕೃತಿಯ ಹೆಸರಲ್ಲಿ ನಾಗರಹೊಳೆಯನ್ನು ಮುಟ್ಟಲಿದೆ. ಕರ್ನಾಟಕ ಹಾಗೂ ಕೇಂದ್ರ ಸರ್ಕಾರಗಳು ಕೋಟಿಗಟ್ಟಲೆ ರೂಪಾಯಿಗಳನ್ನು ಇಲ್ಲಿ ತೊಡಗಿಸಲು ನಿರ್ಧರಿಸಿವೆ. ಆ ಮೂಲಕ ನಾಗರಹೊಳೆಯ ಗಿರಿಜನರನ್ನು ಅಲ್ಲಿಂದ ಎತ್ತಂಗಡಿ ಮಾಡಿ ಪಂಚತಾರ ಹೋಟೆಲುಗಳನ್ನು ಸ್ಥಾಪಿಸಲು ಪ್ರಯತ್ನಗಳು ನಡೆದಿವೆ. ಭೂರಿಯ ಸಮಿತಿಯ ವರದಿಯಂತೆ ಗಿರಿಜನರಿರುವಲ್ಲೇ ಆಸ್ಪತ್ರೆ, ಶಿಕ್ಷಣ, ವಸತಿ ಇತ್ಯಾದಿಗಳನ್ನು ನೀಡಬೇಕೆನ್ನುವ ಮಹತ್ವದ ಸಂಗತಿಗಳನ್ನು ನಿರ್ಲಕ್ಷಿಸುತ್ತಾ ಅವರನ್ನು ಎತ್ತಂಗಡಿ ಮಾಡುವಲ್ಲಿ ಪಂಚತಾರ ಸಂಸ್ಕೃತಿಯ ನೇತಾರರು ಒಂದು ಘಟ್ಟದವರೆಗೆ ಸಫಲರಾಗಿದ್ದಾರೆ. ಇನ್ನೊಂದೆಡೆ ಫ್ಯೂಡಲ್ ಶಕ್ತಿಗಳು ಎಂದೆಂದಿಗೂ ಗಿರಿಜನರ ಮಣ್ಣಿನ ಸಂಬಂಧದಿಂದಾಗಿ ಹುಟ್ಟಿಕೊಂಡ ಪ್ರತಿಭಟನೆಯನ್ನು ಮಟ್ಟಹಾಕಲು ಹಾಗೂ "ಪುನರ್‌ವಸತಿ"ಯ ಹೆಸರಿನಲ್ಲಿ ಅವರನ್ನು ಕಾಡಿನಿಂದ ಹೊರಕ್ಕೆ ತಂದು "ನಾಗರಿಕ"ರನ್ನಾಗಿ ಮಾಡುವ ಜವಾಬ್ದಾರಿಯನ್ನು ತೆಗೆದುಕೊಂಡಿದೆ. ನಾಗರಹೊಳೆಯ ಗಿರಿಜನರ ಇರುವಿಕೆಯ ಹಕ್ಕನ್ನು ಉಳಿಸುವ ಬಗ್ಗೆ ರಚನಾತ್ಮಕವಾದ ಯಾವುದೇ ಕಾರ್ಯಕ್ರಮವನ್ನು ಹಮ್ಮಿಕೊಳ್ಳದೆ ಕೇವಲ ಕೆಲವು ಎಡಪಂಥೀಯ ಸಂಘಟನೆಗಳ ಒಲವು ಗಳಿಸಲು ಕೆ.ಆರ್.ಎಂ.ಎಂ. ಪಂಚತಾರ ಸಂಸ್ಕೃತಿಯ ಬಗ್ಗೆ ಟೀಕಿಸುತ್ತಾ ಮೊಸಳೆ ಕಣ್ಣೀರು ಸುರಿಸುವುದನ್ನು ಈ ಸಂದರ್ಭದಲ್ಲಿ ಗಮನಿಸಬೇಕಾಗಿದೆ. "ಭಾರತಕ್ಕೆ ಸಣ್ಣರಾಜ್ಯಗಳ ಅವಶ್ಯಕತೆಯಿದೆ" ಎನ್ನುವ ಅಜೆಂಡಾವನ್ನು ಮುಂದಿಟ್ಟುಕೊಂಡ ಕೆಲವು ಬಲಪಂಥೀಯ ರಾಜಕೀಯ ನಾಯಕರ ಹೇಳಿಕೆಗಳನ್ನು ಆಗಾಗ್ಗೆ ಉದ್ಧರಿಸುತ್ತಾ ಬಲಪಂಥೀಯ ಸಂಘಟನೆಗಳ ಕಾರ್ಯಕರ್ತರನ್ನು ಓಲೈಸುವ ಕೆ.ಆರ್.ಎಂ.ಎಂ.ನ ತಂತ್ರ ಗಮನಾರ್ಹವಾದುದು. ಬಲಪಂಥೀಯ ತೀವ್ರಗಾಮಿ ಸಂಘಟನೆಗಳ ರಾಜಕೀಯ ತಂತ್ರಗಳಾದ ಕತ್ತಿ (ಒಡಿಕತ್ತಿ)-ಬಂಧೂಕುಗಳನ್ನು ಕೆಲವು ಧಾರ್ಮಿಕ ವಿಧಿಗಳಲ್ಲಿ ಧರಿಸಲಾಗುವ ಸಾಂಪ್ರದಾಯಿಕ ಉಡುಪಿನೊಂದಿಗೆ ಕೈಗಳಲ್ಲೆತ್ತಿಕ್ಕೊಂಡು ಬೀದಿಗಳಲ್ಲಿ "ರೂಟ್ ಮಾರ್ಚ್" ಮಾಡಿ "ಸಂಸ್ಕೃತಿ ಕಾಪಾಡುವ" ಹಾಗೂ "ವೀರತನವನ್ನು ಬಿಂಬಿಸುವ ಪ್ರತಿಜ್ಞೆ ಸ್ವೀಕಾರಗಳು" ಈ ನಿಟ್ಟಿನಲ್ಲಿ ನಮ್ಮ ಗಮನ ಸೆಳೆಯುತ್ತವೆ.

ಗಿರಿಜನರ ಬಳಿಗೆ ನಾಗರಿಕ ಸೌಲಭ್ಯಗಳನ್ನು ಕೊಂಡೊಯ್ಯುವ ಮಾನವೀಯ ಅಂಶಗಳನ್ನು ಗಮನಿಸಲು ಸರಕಾರ ಸಫಲವಾಗಬೇಕಾಗಿದೆ. ಕೊಡಗಿನಲ್ಲಿ "ಅಭಿವೃದ್ಧಿ" ಎಂದರೆ ಮಧ್ಯಮ ಹಾಗೂ ಮೇಲ್ವರ್ಗದ ಹಿತಾಸಕ್ತಿಗಳನ್ನು ಕಾಪಾಡುವುದು ಮಾತ್ರವೆಂದು ಸರ್ಕಾರದ ಪ್ರತಿನಿಧಿಗಳು ತಿಳಿದುಕೊಂಡರೆ ಪ್ರಜಾಪ್ರಭುತ್ವದ ಹೆಸರು ಸದುಪಯೋಗವಾಗುವುದಿಲ್ಲ. ಹೀಗಾಗಿ ಈಗಾಗಲೇ ಹೇಳಿದಂತೆ ಕರ್ನಾಟಕದ ಅಥವಾ ಕೊಡಗಿನ ಮೂಲಗೊತ್ತಿಲ್ಲಪಟ್ಟ ಸಮುದಾಯಗಳ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಕಾರ್ಯಕ್ರಮ "ಅಭಿವೃದ್ಧಿ"ಯಡಿಯಲ್ಲಿ ಬರಬೇಕು ಹಾಗೂ ಅನುಷ್ಠಾನಗೊಳಿಸಬೇಕು. ಇಲ್ಲದಿದ್ದರೆ ಯಾವುದೇ ಬಗೆಯ ಹೋರಾಟ ಅಥವಾ ಅದಕ್ಕೆ

ಮಣಿದಂತೆ ವರ್ತಿಸುವ ಸರಕಾರ ಕೇವಲ ಮೇಲ್ವರ್ಗದ ಹಿತಾಸಕ್ತಿಯನ್ನು ಮಾತ್ರ ಪ್ರತಿನಿಧಿಸಲು ಸಾಧ್ಯವಾಗುತ್ತದೆ.

ಕೊಡಗಿನ ಶ್ರೀಮಂತರಲ್ಲಿ ಬಹುತೇಕ ಮಂದಿ ಇಂದು ಕೊಡಗಿನ ಹೊರಗೆ ಬೇರೆ ಬೇರೆ ನಗರಗಳಲ್ಲಿ ಶಾಶ್ವತವಾಗಿ ನೆಲೆಯೂರಿದ್ದಾರೆ. ಮಧ್ಯಮ ವರ್ಗದ ಪ್ರತಿಯೊಂದು ಕುಟುಂಬದ ಒಬ್ಬಿಬ್ಬರಾದರೂ ಕೊಡಗಿನ ಹೊರಗೆ ಉದ್ಯೋಗಗಳಲ್ಲಿ ಹಾಗೂ ಉದ್ಯಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರೆಲ್ಲರ ಭವಿಷ್ಯ, ಶ್ರೇಯಸ್ಸುಗಳ ಬಗ್ಗೆ ಕಿಂಚಿತ್ತೂ ಕಾಳಜಿಯಿಲ್ಲದೆ ಕೆ.ಆರ್.ಎಂ.ಎಂ. ಕೊಡುತ್ತಿರುವ ಹೇಳಿಕೆಗಳಿಂದಾಗಿ ಉಂಟಾಗಬಹುದಾದ ಅನಾಹುತಗಳ ಬಗ್ಗೆ ಮುನ್ನೆಚ್ಚರಿಕೆ ಅಗತ್ಯ. ಕೊಡಗಿನ ಹೊರಗೆ ನೆಲೆಸಿರುವ ಒಂದಂಶ ಜನರು ತವರಿಗೆ ಹಿಂತಿರುಗುವುದು ಅನಿವಾರ್ಯವಾದಲ್ಲಿ ಕೊಡಗಿನ ತರುಣಪೀಳಿಗೆ ಅವಕಾಶವಂಚಿತರಾಗಿ, ಉದ್ಯೋಗವಂಚಿತರಾಗಿ ಕೊಡಗಿನೊಳಗೆ ವಿಲಿವಿಲಿ ಒದ್ದಾಡುವ ದುರ್ಭರ ಪರಿಸ್ಥಿತಿ ಎದುರಾಗಬಹುದು. ಅದಕ್ಕೆ ಸೂಕ್ತ ಪರಿಹಾರವನ್ನು ಸೂಚಿಸಲು ವಿಫಲವಾಗಿರುವ ಕೆ.ಆರ್.ಎಂ.ಎಂ.ನ ಸಿದ್ಧಾಂತಗಳ ವಿಮರ್ಶೆ ಈಗ ತೀರಾ ಅಗತ್ಯವಾಗಿದೆ. ಕೊಡಗಿನ ''ಮೂಲನಿವಾಸಿಗಳಾಗಿ'' ಜೀವನದುದ್ದಕ್ಕೂ ಜೀತದಾಳುಗಳಾಗಿಯೇ ಬದುಕುತ್ತಿರುವ ಎರವ, ಫಣಿಯ, ಕುರುಬ, ಕೆಂಬಟ್ಟಿ, ಕಾಪಾಳ ಮುಂತಾದ ಸಮುದಾಯಗಳ ಜನರು ಸಹಸ್ರಾರು ಸಂಖ್ಯೆಯಲ್ಲಿ ಅವಿದ್ಯಾವಂತರಾಗಿ, ಊಳಿಗಮಾನ್ಯ ಪದ್ಧತಿಯ ಶೃಂಖಲೆಯಲ್ಲಿ ಶಾಶ್ವತ ಬಂಧಿಗಳಾಗಿದ್ದಾರೆ. ಇವರೆಲ್ಲರ ಭವಿಷ್ಯ, ಸ್ಥಾನ-ಮಾನಗಳ, ದಾಸ್ಯ ವಿಮೋಚನೆಗೆ ಪರಿಹಾರ ಹುಡುಕುವುದನ್ನು ಬಿಟ್ಟು ಕೊಡಗಿನ ಇಂಥ ''ಸಂಸ್ಕೃತಿ''ಯನ್ನು ಉಳಿಸಿ, ಬೆಳೆಸುವ, ''ರಾಮರಾಜ್ಯ''ವನ್ನು ಮತ್ತೆ ತರುವ ಸಿದ್ಧಾಂತಗಳು ಈ ಪ್ರಜಾತಾಂತ್ರಿಕ-ಸಮಾಜವಾದಿ-ಗಣರಾಜ್ಯದ ಸಂವಿಧಾನದ ಚೌಕಟ್ಟಿನಲ್ಲಿ ಪ್ರಶ್ನಾರ್ಹವಾದವು.

ಕೊಡಗಿಗೆ ೬೦೦.ಕೋಟಿ ರೂಪಾಯಿ ಆದಾಯ ಇದೆಯೋ ಅಥವಾ ೬೨ ಕೋಟಿ ರೂಪಾಯಿ ಆದಾಯವಿದೆಯೋ; ಅದನ್ನು ಹೇಗೆ ಯಾರ್‍ಯಾರಿಗಾಗಿ ಉಪಯೋಗಿಸ ಬೇಕು-ಎನ್ನುವುದು; ಅದೊಂದು ಸಮಸ್ಯೆಯಾದರೆ - ಅದನ್ನು ಹೇಗೆ ಪರಿಹರಿಸಬೇಕೆನ್ನುವುದು ಇನ್ನೊಂದು ಪ್ರಶ್ನೆ. ಇವುಗಳೊಂದಿಗೆ ನೀರು-ಭೂಮಿ-ಸಂಪನ್ಮೂಲಗಳ ಹಂಚಿಕೆಯ ಪ್ರಶ್ನೆಗಳೂ ಇವೆ. ಹಾಗೆಯೇ ನಿರುದ್ಯೋಗ, ಭ್ರಷ್ಟತೆ, ವಿದೇಶಿ ಬಂಡವಾಳ, ಬಹುರಾಷ್ಟ್ರೀಯ ಕಂಪನಿಗಳ ಭರಾಟೆ, ಕೊಡಗಿನವರದ್ದೇ ಉಸ್ತುವಾರಿಯಲ್ಲಿರುವ ಟಾಟಾಗಳ ಕನ್ಸಾಲಿಡೇಟ್ ಕಾಫಿ ಲಿಮಿಟೆಡ್‌ನಂತಹ ಕಂಪೆನಿಗಳ ಬಂಡವಾಳ, ಟಿಂಬರ್ ಲಾಬಿ.... ಇತ್ಯಾದಿ ಪ್ರಶ್ನೆಗಳೂ ಇವೆ. ಈ ಪ್ರಶ್ನೆಗಳಿಗೆ ಸಂಬಂಧಿಸಿದ ಚರ್ಚೆಯ ಸ್ವರೂಪವೇ ಬೇರೆಯದು. ಈ ರೀತಿಯ ಪ್ರಶ್ನೆಗಳಿಗೆ ಉತ್ತರವಾಗಿ ಭೌದ್ಧಿಕವಾಗಿ ದಿವಾಳಿಯಾಗಿರುವ ಕೆ.ಆರ್.ಎಂ.ಎಂ. "ಕೊಡಗು ಪ್ರತ್ಯೇಕ ರಾಜ್ಯ ಬೇಡಿಕೆಯ

ಹೋರಾಟವನ್ನು ಹತ್ತಿಕ್ಕಲು ರಾಜ್ಯ ಸರ್ಕಾರವು ಬುದ್ಧಿಜೀವಿಗಳಿಗೆ ರೂ.೫ ಕೋಟಿಯಷ್ಟು ಕಾಳಧನ ನೀಡುವುದರೊಂದಿಗೆ ಷಡ್ಯಂತ್ರ ಹೂಡಿದೆ.... ಕನ್ನಡ ಪ್ರಾಧಿಕಾರದ ಅಧ್ಯಕ್ಷ ಚಂದ್ರಶೇಖರ ಪಾಟೀಲ್ ಸೇರಿದಂತೆ ಅನೇಕ ಬುದ್ಧಿ ಜೀವಿಗಳು ಸರ್ಕಾರದ ಏಜೆಂಟರಂತೆ ವರ್ತಿಸುತ್ತಿದ್ದಾರೆ.... ಸರ್ಕಾರವು ಬುದ್ಧಿ ಜೀವಿಗಳನ್ನು ಬಳಸಿಕೊಂಡು ಜಾತಿ ಹೆಸರಲ್ಲಿ ಕೆ.ಆರ್.ಎಂ.ಎಂನ್ನು ಭಗ್ನಗೊಳಿಸಲು ಯತ್ನಿಸುತ್ತಿದ್ದು, ಶಕ್ತಿ ಕೇಂದ್ರದ ಅಧ್ಯಕ್ಷ ಚಿದಾನಂದ ಮೂರ್ತಿ ಸೇರಿದಂತೆ ಅನೇಕರು ಅದಕ್ಕೆ ಕುಮ್ಮುಕ್ಕು ನೀಡುತ್ತಿದ್ದಾರೆ" ಎಂದಿತ್ಯಾದಿ ಆಧಾರ ರಹಿತ ಹೇಳಿಕೆಗಳನ್ನು ನೀಡಿದೆ. ವಿಮರ್ಶಕರ ಬೌದ್ಧಿಕ ವಾಗ್ವಾದಗಳನ್ನು ಎದುರಿಸಲು ಶಕ್ತಿ ಇಲ್ಲದೆ ಮತ್ತು ಸಹಿಸಿಕೊಳ್ಳಲು ಸಾಧ್ಯವಾಗದೆ ಅವರ ಚಾರಿತ್ರವಧೆಯನ್ನು ಶಿಸ್ತು ಬದ್ಧವಾಗಿ ಮಾಡುವ ಮೂಲಭೂತವಾದಿ ಧೋರಣೆಯನ್ನು ಅದು ಸ್ಪಷ್ಟವಾಗಿ ತೋರಿದೆ. ಇಂತಹ ಉತ್ತರಗಳು ಕೊಡಗಿನ ಅಭಿವೃದ್ಧಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವಾಗಲಾರವು. ''ಮೂಲನಿವಾಸಿಗಳೆಂದು'' ಭಾರತೀಯರನ್ನು ಒಡೆದು ಹಿಟ್ಲರನ ನಾಜೀಗಳನ್ನು ನೆನಪಿಸುವ ಮೂಲಕವಾಗಲಿ ಅಥವಾ ''ವಲಸೆಗಾರರನ್ನು'' ಯಹೂದಿಗಳ ರೀತಿ ಬ್ರಾಂಡ್ ಮಾಡಿ ಟಾರ್ಗೆಟ್ ಮಾಡುವುದರ ಮೂಲಕವಾಗಲಿ ಖಂಡಿತವಾಗಿಯೂ ಉತ್ತರ ಸಿಗುವುದಿಲ್ಲ. ಈ ಪ್ರಶ್ನೆಗಳಿಗೆ ರಾಜಕೀಯ ಮಾತುಕತೆಗಳಲ್ಲಿ ಉತ್ತರ ಪಡೆಯಬಹುದೇ ಹೊರತು ಭಾರತದ ಪ್ರಜೆಗಳನ್ನು ಯಾವುದೋ ವ್ಯಕ್ತಿಯ ಅಥವಾ ವರ್ಗದ ಸಂಕುಚಿತ ರಾಜಕಾರಣಕ್ಕಾಗಿ ಒಡೆಯುವ ಮೂಲಕ ಅಲ್ಲ. ಹೀಗಾಗಿ ಕೊಡಗಿನ ''ನೆಲ-ಜಲ-ಸಂಸ್ಕೃತಿ''ಯ ''ಜನ್ಮದತ್ತವಾದ ಹಕ್ಕು'' ಯಾವುದೇ ಪ್ರಜಾತಾಂತ್ರಿಕ ತತ್ವಗಳ ತಳಹದಿಯಿಲ್ಲದ ಕೆ.ಆರ್.ಎಂ.ಎಂ.ನಂಥ ಮೂಲಭೂತವಾದಿ ಸಂಘಟನೆಗಳಿಗಾಗಲಿ ಅಥವಾ ಅದರ ಏಕೈಕ ವಾರಸುದಾರರಿಗಾಗಲಿ ಅಥವಾ ಯಾವುದೇ ಒಂದು ವರ್ಗಕ್ಕೆ ಮೀಸಲಾದದ್ದಲ್ಲ. ಈ ಭೂಮಿಯಲ್ಲಿ ಹುಟ್ಟಿ-ಬೆಳೆದು, ಜೀವನ ನಡೆಸುವ ಪ್ರತಿಯೊಬ್ಬ ಮನುಷ್ಯನ ಸಾಂವಿಧಾನಿಕ ಹಕ್ಕಿದು ಎಂಬುದನ್ನು ನಾವೆಲ್ಲ ಅರಿತುಕೊಳ್ಳೋಣ.

## ಪರಾಮರ್ಶನ ಲೇಖನಗಳು

ಈ ಪ್ರಬಂಧದ ಕರಡು ಪ್ರತಿಯನ್ನು ಓದಿ ಸಂದರ್ಭೋಚಿತ ಸಲಹೆಗಳನ್ನು ನೀಡಿದ ಡಾ.ಶಿವರಾಂ ಪಡಿಕ್ಕಲ್, ಡಾ.ಎಂ.ಚಂದ್ರಪೂಜಾರಿ, ಡಾ. ಎಚ್. ಎಂ. ಸೋಮಶೇಖರಪ್ಪ ಹಾಗೂ ಶ್ರೀ ಮಾಧವ ಪೆರಾಜೆಯವರಿಗೆ ಕೃತಜ್ಞತೆಗಳು.

೧. ಟಿ.ಪಿ.ವಿಜಯ್, *ಆಸ್ಪೆಕ್ಟ್ಸ್ ಆಫ್ ಸ್ಲೇವರಿ ಇನ್ ದಿ ನೈನ್‌ಟೀನ್ತ್ ಸೆಂಚುರಿ*, ಇಂಡಿಕಾ, ಮುಂಬೈ, ೧೯೯೨.

೨. ತಂಬಂಡ ವಿಜಯ್ ಪೂಣಚ್ಚ, *ಕೊಡಗಿನ ಚರಿತ್ರೆಯ ಮೇಲೆ ಕೆಲವು ಟಿಪ್ಪಣಿಗಳು*, ಅರಿವು ಬರಹ, ಸಂಚಿಕೆ III, ಮಂಗಳೂರು, ೧೯೯೨.

೩. ಡಿ.ಬಿ. ರಾಮಚಂದ್ರಾಚಾರ್, *ಅವಕಾಶದ ಅಲೆಗಳ ಮೇಲೆ*, ಮೈಸೂರು, ೧೯೯೩.

೪. ತಂಬಂಡ ವಿಜಯ್ ಪೂಣಚ್ಚ, *ವಸಾಹತು ಕಾಲದ ಕೊಡಗಿನ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಪಟ್ಟೋಳೆ ಪಳಮೆ: ಒಂದು ಹಿನ್ನೋಟ*, ಅರಿವು ಬರಹ, ಸಂಚಿಕೆ VIII, ಮಂಗಳೂರು, ೧೯೯೫.

೫. ಟಿ.ಪಿ. ವಿಜಯ್, *ಆನರ್ ಇನ್ ಚೈನ್ಸ್ : ದಿ ಪ್ರಾಬ್ಲೆಮ್ ಆಫ್ ಹಿಟ್ಟಿಬಿಟ್ಟಿ ಚಾಕ್ರಿ ಇನ್ ಜಮ್ಮ ಟೆನ್ಯೂರ್ ಇನ್ ಕೂರ್ಗ್ (೧೮೦೦-೧೯೩೦)*, ದಿ ಇಂಡಿಯನ್ ಇಕಾನಾಮಿಕ್ ಆಯಂಡ್ ಸೋಶಿಯಲ್ ಹಿಸ್ಟರಿ ರಿವ್ಯೂ, ಪೇಜ್ ೩೨, ನವದೆಹಲಿ, ೧೯೯೫.

೬. ಮುಝಾಫರ್ ಅಸ್ಸಾದಿ, *ಟ್ರೈಬಲ್ಸ್ ಆನ್ ರಾಥ್ : ಕಾನ್‌ಫ್ರಾಂಟಿಂಗ್ ಇಕೋ ಟೆರ್ರರಿಸಂ*, ಇಕಾನಾಮಿಕ್ ಆಯಂಡ್ ಪೊಲಿಟಿಕಲ್ ವೀಕ್ಲಿ, ಸಂಚಿಕೆ XXXI ನಂ, ೪೦, ಮುಂಬೈ, ಅಕ್ಟೋಬರ್ ೫, ೧೯೯೬.

೭. *ಪ್ರೆಸಿಡೆಂಟ್ ಪಿ.ಎಂ. ಅರ್ಜ್ಡ್ ಟು ಗಿವ್ ಕೊಡಗು ಸ್ಟೇಟ್ ವುಡ್*, ಪತ್ರಿಕಾ ವರದಿ, ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ, ಬೆಂಗಳೂರು, ಪುಟ ೪, ಸೆಪ್ಟಂಬರ್ ೧, ೧೯೯೭.

೮. ದಿನಾಂಕ ೩, ಜೂನ್ ೧೯೯೭ರಂದು ಕೊಡಗು ರಾಜ್ಯ ಮುಕ್ತಿ ಮೋರ್ಛಾದ ಪ್ರಧಾನ ಸಂಚಾಲಕರಾದ ಎನ್.ಯು. ನಾಚಪ್ಪ ಅವರು ವಿಶ್ವಸಂಸ್ಥೆಯ ಸೆಕ್ರೆಟರಿ ಜನರಲ್ ಕೋಫಿ ಅಮ್ಮನ್ ಅವರಿಗೆ ಬರೆದ ಪತ್ರ.

೯. *ಫಿಯರ್ ಸೈಕೊಸಿಸ್ ಗ್ರಿಪ್ಸ್ ಮೈನಾರಿಟೀಸ್ ಇನ್ ಕೊಡಗು*, ಪತ್ರಿಕಾ ವರದಿ, ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆ, ಬೆಂಗಳೂರು, ಪುಟ. ೫, ಡಿಸೆಂಬರ್ ೨೩, ೧೯೯೭.

೧೦. *ಕೆ.ಆರ್.ಎಂ.ಎಂ. ವಾಷಸ್ ಹ್ಯಾಂಡ್ಸ್ ಆಫ್ ವಿರಾಜ್‌ಪೇಟ್ ಇಶ್ಯೂ*, ಪತ್ರಿಕಾ ವರದಿ, ಇಂಡಿಯನ್ ಎಕ್ಸ್‌ಪ್ರೆಸ್ ದಿನಪತ್ರಿಕೆ, ಬೆಂಗಳೂರು, ಪುಟ. ೫, ಡಿಸೆಂಬರ್ ೨೪, ೧೯೯೭.

೧೧. *ಕೊಡಗು ಉರಿದದ್ದು*, ಪತ್ರಿಕಾ ವರದಿ, ಲಂಕೇಶ್ ಪತ್ರಿಕೆ, ಬೆಂಗಳೂರು, ಡಿಸೆಂಬರ್ ೨೪, ೧೯೯೭.

೧೨. ಮಡಿಕೇರಿಯ ''**ಶಕ್ತಿ**'' ಹಾಗೂ ''**ಆಂದೋಲನ**'' ಪತ್ರಿಕೆಗಳ ಆವೃತ್ತಿಗಳು (೧೯೯೨-೧೯೯೮).

೧೩. ವಿರಾಜಪೇಟೆಯ ''**ಕೊಡಗು ಸಮಾಚಾರ**'' ವಾರಪತ್ರಿಕೆಯ ಆವೃತ್ತಿಗಳು (೧೯೯೬-೯೮)

೧೪. ದಿನಾಂಕ ೮, ಜನವರಿ ೧೯೯೮ರಂದು ಕೊಡಗು ರಾಜ್ಯ ಮುಕ್ತಿ ಮೋರ್ಚಾದ ಪ್ರಧಾನ ಸಂಚಾಲಕರಾದ ಎನ್.ಯು.ನಾಚಪ್ಪ ಅವರು ಕೊಡಗು ಜಿಲ್ಲಾಧಿಕಾರಿಗಳ ಮೂಲಕ ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳಿಗೆ ಬರೆದ ಪತ್ರ.

೧೫. ಜನ ವಿಮುಕ್ತಿ ಮಾಸಪತ್ರಿಕೆ, ಶಿವಮೊಗ್ಗ, ಜನವರಿ ೧೯೯೮.

## ಮಂಟಪಮಾಲೆ

## ೩೨

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟು ಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕ ವಾಗುವವೆಂಬ ನಂಬಿಕೆಯಿಂದ ಕಡಿಮೆ ಬೆಲೆಯ ಕಿರು ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಡಾ. ಚಂದ್ರಶೇಖರ ಕಂಬಾರ
ಕುಲಪತಿಯವರು

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ